# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1040

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಿ. ಪಾಟೀಲ್ (ಬಸವನ ಬಾಗೇವಾಡಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ಕ್ರೀಡಾ ಇಲಾಖೆಯ ಹೆಸರಿಗೆ ಜಮೀನು ಖಾತಾ ಬದಲಾವಣೆಯಾಗಿರುತ್ತದೆಯೇ;<br><br>ಇಲಾಖೆಯಿಂದ ತಾಲ್ಲೂಕು ಕ್ರೀಡಾಂಗಣ ನಿರ್ಮಿಸಲು ಪ್ರಸ್ತಾವನೆ ಸರ್ಕಾರಕ್ಕೆ ಬಂದಿದೆಯೇ; | ಹೌದು.<br><br>ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ದಿನಾಂಕ: 18-02-2020 ರಂದು ತಕ್ಕಳಕಿ ಗ್ರಾಮದ ಸರ್ವೆ ನಂ-147 ರಲ್ಲಿ 6 ಎಕರೆ ಜಮೀನು ಮಂಜೂರಾಗಿದ್ದು, ಇಲಾಖೆಯ ಹೆಸರಿಗೆ ಖಾತೆ ಆಗಿರುತ್ತದೆ.<br><br>ಇಲ್ಲ.<br><br>ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ವಿವರವಾದ ಅಂದಾಜು ಪಟ್ಟಿಯನ್ನು ತಯಾರಿಸಿ, ಸಲ್ಲಿಸಲು ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ, ವಿಜಯಪುರ ಇವರಿಗೆ ದಿನಾಂಕ: 01-06-2020 ರಂದು ಕೋರಲಾಗಿದ್ದು, ಸದರಿಯವರು ಅಂದಾಜು ಪಟ್ಟಿ ಸಲ್ಲಿಸಬೇಕಾಗಿದೆ. |
| ಆ) | ಹಾಗಿದ್ದಲ್ಲಿ, ಬಸವನ ಬಾಗೇವಾಡಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ಅನುದಾನ ಒದಗಿಸಲು ಸರ್ಕಾರ ಏನು ಕ್ರಮ ಕೈಗೊಂಡಿರುತ್ತದೆ? | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ವೈಎಸ್ ಡಿ-/ಇಬಿಬಿ/94/2020

(ಸಿ. ಟಿ. ರವಿ)
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1111

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಧಾರವಾಡ ತಾಲ್ಲೂಕಿನಲ್ಲಿ ಕ್ರೀಡೆಗಳನ್ನು ಉತ್ತೇಜಿಸಲು ಗ್ರಾಮೀಣ ಭಾಗದಲ್ಲಿ ಕ್ರೀಡಾ ಸಂಕೀರ್ಣ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ. | ಇಲ್ಲ. |
| 2 | ಹಾಗಿದ್ದಲ್ಲಿ ಕ್ರೀಡಾ ಸಂಕೀರ್ಣ ನಿರ್ಮಾಣ ಮಾಡಲು ಯಾವುದಾದರೂ ಸ್ಥಳ ಗುರುತಿಸಲಾಗಿದೆಯೇ. | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| 3 | ಗುರುತಿಸಲಾಗಿದ್ದರೆ, ಈ ಕಾಮಗಾರಿಗೆ ಪ್ರಸಕ್ತ ಸಾಲಿನಲ್ಲಿ ಮೀಸಲಿಟ್ಟ ಹಾಗೂ ಬಿಡುಗಡೆಯಾದ ಅನುದಾನವೆಷ್ಟು? | |

ವೈಎಸ್ ಡಿ-/ಇಬಿಬಿ/87/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1057

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರ ಆಡಳಿತಾತ್ಮಕ ಅನುಮೋದನೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಮಾಹಿತಿ ನೀಡುವುದು); | ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 335 ಯುಸೇಕ್ರೀ 2016, ಬೆಂಗಳೂರು, ದಿನಾಂಕ: 14.02.2017ರನ್ವಯ ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ರೂ. 489.56 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ತಾತ್ವಿಕ ಅನುಮೋದನೆ ನೀಡಲಾಗಿರುತ್ತದೆ. ಸದರಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರ ಆಡಳಿತಾತ್ಮಕ ಅನುಮೋದನೆ ನೀಡಿರುವುದಿಲ್ಲ. |
| ಆ) | ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿದ್ದರೂ, ಇದುವರೆಗೂ ಕಾಮಗಾರಿಗಳನ್ನು ಕೈಗೊಳ್ಳದಿರಲು ಕಾರಣಗಳೇನು (ಮಾಹಿತಿ ನೀಡುವುದು); | ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ರೂ.489.56 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 335 ಯುಸೇಕ್ರೀ 2016, ದಿನಾಂಕ: 14.02.2017ರನ್ವಯ ತಾತ್ವಿಕ ಅನುಮೋದನೆ ನೀಡಲಾಗಿದ್ದು, ಅನುದಾನದ ಕೊರತೆಯಿಂದಾಗಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗಿರುವುದಿಲ್ಲ. |
| ಇ) | ತಾಲ್ಲೂಕು ಕೇಂದ್ರದಲ್ಲಿರುವ ಕ್ರೀಡಾಂಗಣದ ಕಾಮಗಾರಿಗಳನ್ನು ತುರ್ತಾಗಿ ಕೈಗೊಳ್ಳಬೇಕೆಂಬ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ (ಮಾಹಿತಿ ನೀಡುವುದು)? | ತಾಲ್ಲೂಕು ಕ್ರೀಡಾಂಗಣಗಳಲ್ಲಿ ಕ್ರೀಡಾ ಅಂಕಣಗಳು, ಆವರಣ ಗೋಡೆ/ತಂತಿ ಬೇಲಿ, ನೀರು ಸರಬರಾಜು, ವಿದ್ಯುತ್ ವ್ಯವಸ್ಥೆ, ಶೌಚಾಲಯ, ಪೆವಿಲಿಯನ್ ಕಟ್ಟಡ, ಮತ್ತಿತರ ಕನಿಷ್ಠ ಮೂಲ ಸೌಕರ್ಯಗಳನ್ನು ಕಲ್ಪಿಸಲು ಆದ್ಯತೆ ನೀಡಲಾಗುತ್ತಿದೆ. ಅನುದಾನದ ಲಭ್ಯತೆ ಆಧರಿಸಿ ತಾಲ್ಲೂಕು ಕ್ರೀಡಾಂಗಣಗಳ ಹೆಚ್ಚುವರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ.<br><br>ಬೆಂಗಳೂರು ನಗರದ ಆನೇಕಲ್ ತಾಲ್ಲೂಕು |

| | | |
|---|---|---|
| | | ಕ್ರೀಡಾಂಗಣದಲ್ಲಿ ಆಟದ ಮೈದಾನ, ಚೈನ್ ಲಿಂಕ್ ಬೇಲಿ, ವಿದ್ಯುತ್ ವ್ಯವಸ್ಥೆ, ನೀರು ಸರಬರಾಜು, ಶೌಚಾಲಯ ಹಾಗೂ ಪೆವಿಲಿಯನ್ ಕಟ್ಟಡ ಸೌಲಭ್ಯ ಕಲ್ಪಿಸಲಾಗಿದೆ. ಅಲ್ಲದೆ ರೂ. 50.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಪ್ರೇಕ್ಷಕರ ಗ್ಯಾಲರಿ ನಿರ್ಮಿಸಲು ದಿನಾಂಕ: 19.02.2020ರಂದು ಆಡಳಿತಾತ್ಮಕ ಅನುಮೋದನೆ ನೀಡಿ, ಮೊದಲನೇ ಕಂತಾಗಿ ರೂ. 25.00 ಲಕ್ಷಗಳ ಅನುದಾನವನ್ನು ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ನಿಗಮ ನಿಯಮಿತ ಸಂಸ್ಥೆಗೆ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದ್ದು, ಶೇ.50ರಷ್ಟು ಕಾಮಗಾರಿ ಪೂರ್ಣಗೊಂಡಿರುತ್ತದೆ. |

ವೈಎಸ್ ಡಿ-/ಇಬಿಬಿ/86/2020

(ಸಿ. ಟಿ. ರವಿ)
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1725

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಧಾರವಾಡ ತಾಲ್ಲೂಕು ಮತಕ್ಷೇತ್ರದ ವ್ಯಾಪ್ತಿಯಲ್ಲಿ ದೇಸಿ ಶೈಲಿಯ ಕುಸ್ತಿ ಕ್ರೀಡೆಯನ್ನು ಉತ್ತೇಜಿಸಲು ಸರ್ಕಾರ ಗರಡಿ ಮನೆ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ. | ಹೌದು, ಪ್ರಸ್ತಾವನೆಯು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಆಯುಕ್ತಾಲಯದಲ್ಲಿ ಸ್ವೀಕೃತವಾಗಿದೆ. |
| 2 | ಹಾಗಿದ್ದಲ್ಲಿ, ಪ್ರಸಕ್ತ ಸಾಲಿನಲ್ಲಿ ಗರಡಿ ಮನೆ ನಿರ್ಮಾಣ ಮಾಡಲು ಮೀಸಲಿರಿಸಿದ ಅನುದಾನವೆಷ್ಟು. | ಪ್ರಸಕ್ತ ಸಾಲಿನಲ್ಲಿ ಗರಡಿ ಮನೆ ನಿರ್ಮಾಣ ಮಾಡಲು ಯಾವುದೇ ಅನುದಾನ ಮೀಸಲಿಟ್ಟಿರುವುದಿಲ್ಲ. |
| 3 | ಈಗಾಗಲೇ ಇರುವ ಗರಡಿ ಮನೆಗಳಿಗೆ ಕ್ರೀಡಾ ಸಲಕರಣೆಗಳನ್ನು ಖರೀದಿಸಲು ಅನುದಾನವನ್ನು ಮೀಸಲಿಡಲಾಗಿದೆಯೇ. | ಈಗಾಗಲೇ ಇರುವ ಗರಡಿ ಮನೆಗಳಿಗೆ ಕ್ರೀಡಾ ಸಲಕರಣೆಗಳನ್ನು ಖರೀದಿಸಲು ಅನುದಾನವನ್ನು ನೀಡುವ ಯೋಜನೆ ಇರುವುದಿಲ್ಲ. |
| 4 | ಹಾಗಿದ್ದಲ್ಲಿ, ಧಾರವಾಡ ತಾಲ್ಲೂಕಿಗೆ ಮೀಸಲಿಟ್ಟ ಅನುದಾನವೆಷ್ಟು. | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ವೈಎಸ್ ಡಿ-/ಇಬಿಬಿ/85/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1069

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಗಣೇಶ್ ಜಿ.ಎನ್. (ಕಂಪ್ಲಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯವತಿಯಿಂದ ರಾಜ್ಯದಲ್ಲಿ ಯಾವ ಯೋಜನೆಗಳನ್ನು ರೂಪಿಸಲಾಗಿರುತ್ತದೆ; ಅದಕ್ಕೆ ಇರುವಂತಹ ಮಾನ ದಂಡಗಳೇನು; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ರಾಜ್ಯದಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ ಮತ್ತು ಮಾನದಂಡಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಆ) | ಬಳ್ಳಾರಿ ಜಿಲ್ಲೆಯಲ್ಲಿ ಬರುವಂತಹ ಎಲ್ಲಾ ತಾಲ್ಲೂಕು ಕೇಂದ್ರಗಳಿಗೆ ಮತ್ತು ಗ್ರಾಮಗಳಿಗೆ 2016-17 ರಿಂದ ಇಲ್ಲಿಯವರೆಗೆ ಯಾವ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗಿದೆ (ವಿವರ ನೀಡುವುದು) | ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಮತ್ತು ಗ್ರಾಮಗಳಲ್ಲಿ 2016-17 ರಿಂದ ಇಲಾಖೆಯ ವತಿಯಿಂದ ಕೈಗೊಳ್ಳಲಾಗಿರುವ ಯೋಜನೆಗಳ ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಿದೆ. |

ವೈಎಸ್ ಡಿ-/ಇಬಿಬಿ/84/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಅನುಬಂಧ-1

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ರಾಜ್ಯದಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ ಮತ್ತು ಮಾನದಂಡಗಳು

1. **ನಗದು ಪುರಸ್ಕಾರ:** ರಾಷ್ಟ್ರೀಯ ಮತ್ತು ಅಂತರ-ರಾಷ್ಟ್ರೀಯ ಮಟ್ಟದ ಕ್ರೀಡಾಕೂಟಗಳಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ಕೆಳಕಾಣಿಸಿದಂತೆ ನಗದು ಪುರಸ್ಕಾರವನ್ನು ನೀಡಲಾಗುತ್ತಿದೆ.

| ಕ್ರಸ | ವಿವರ | ಚಿನ್ನ (ರೂ ಲಕ್ಷಗಳಲ್ಲಿ) | ಬೆಳ್ಳಿ (ರೂ ಲಕ್ಷಗಳಲ್ಲಿ) | ಕಂಚು (ರೂ ಲಕ್ಷಗಳಲ್ಲಿ) |
|---|---|---|---|---|
| 1 | ಒಲಂಪಿಕ್ಸ್ | 500.00 | 300.00 | 200.00 |
| 2 | ಏಷಿಯನ್ ಗೇಮ್ಸ್ | 25.00 | 15.00 | 8.00 |
| 3 | ಕಾಮನ್ ವೆಲ್ತ್ ಗೇಮ್ಸ್ | 25.00 | 15.00 | 8.00 |
| 4 | ವರ್ಲ್ಡ್ ಕಪ್/ಚಾಂಪಿಯನ್ ಶಿಪ್ (ಭಾರತ ಸರ್ಕಾರದಿಂದ ಅಂಗೀಕೃತವಾಗಿ ಭಾರತ ತಂಡದ ಭಾಗವಾಗಿ ಪ್ರತಿನಿಧಿಸಿರಬೇಕು) | 5.00 | 3.00 | 2.00 |
| 5 | ನ್ಯಾಷನಲ್ ಗೇಮ್ಸ್ (ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ಕ್ರೀಡೆಗಳು) | 5.00 | 3.00 | 2.00 |
| 6 | ನ್ಯಾಷನಲ್ ಚಾಂಪಿಯನ್ ಶಿಪ್ (ಒಲಂಪಿಕ್ ಕ್ರೀಡೆಗಳಿಗೆ) | 2.00 | 1.00 | 0.50 |
| 7 | ಜೂನಿಯರ್ ನ್ಯಾಷನಲ್ (ಒಲಂಪಿಕ್ ಕ್ರೀಡೆಗಳಿಗೆ) | 0.50 | 0.25 | 0.15 |
| 8 | ಸಬ್ ಜೂನಿಯರ್ ನ್ಯಾಷನಲ್ (ಒಲಂಪಿಕ್ ಕ್ರೀಡೆಗಳಿಗೆ) | 0.25 | 0.15 | 0.10 |

2. **ಏಕಲವ್ಯ ಪ್ರಶಸ್ತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಏಕಲವ್ಯ ಪ್ರಶಸ್ತಿ ನೀಡಲಾಗುವುದು.
3. **ಜೀವಮಾನ ಸಾಧನೆ ಪ್ರಶಸ್ತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳಿಗೆ ತರಬೇತಿ ನೀಡಿದ ರಾಜ್ಯದ ತರಬೇತುದಾರರಿಗೆ ಅವರ ಜೀವಮಾನ ಸಾಧನೆಗೆ ಪ್ರಶಸ್ತಿ ನೀಡಲಾಗುವುದು.
4. **ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ:** ದೇಸೀ ಗ್ರಾಮೀಣ ಕ್ರೀಡೆಗಳಲ್ಲಿ ವಿಶೇಷ ಸಾಧನೆ ಮಾಡಿದ ರಾಜ್ಯದ ಗ್ರಾಮೀಣ ಕ್ರೀಡಾ ಪ್ರತಿಭೆಗಳಿಗೆ ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ ಹಾಗೂ ನಗದನ್ನು ನೀಡಿ ಗೌರವಿಸಲಾಗುವುದು.
5. **ಕ್ರೀಡಾ ಪೋಷಕ ಪ್ರಶಸ್ತಿ:** ಕ್ರೀಡೆಯ ಅಭಿವೃದ್ಧಿಗೆ ಗಣನೀಯ ಕೊಡುಗೆ ನೀಡಿದ ಖಾಸಗಿ ಸಂಘ-ಸಂಸ್ಥೆಗಳಿಗೆ ಉತ್ತೇಜನ ನೀಡಲು ಕ್ರೀಡಾ ಪೋಷಕ ಪ್ರಶಸ್ತಿ ನೀಡಲಾಗುತ್ತಿದೆ.
6. **ಶೈಕ್ಷಣಿಕ ಶುಲ್ಕ ಮರುಪಾವತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯದಿಂದ ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗುತ್ತಿದೆ.
7. **ಕ್ರೀಡಾ ವಿದ್ಯಾರ್ಥಿ ವೇತನ:** ರಾಜ್ಯ ಮಟ್ಟದ ಪದಕ ವಿಜೇತರಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ರೂ.10,000/- ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.
8. **ಮಾಸಾಶನ:** 50 ವರ್ಷ ವಯೋಮಾನ ಮೀರಿದ ಕಷ್ಟ ಪರಿಸ್ಥಿತಿಯಲ್ಲಿರುವ ಮಾಜಿ ಕ್ರೀಡಾಪಟುಗಳಿಗೆ ಮಾಸಾಶನವನ್ನು ಕೆಳಕಾಣಿಸಿದಂತೆ ನೀಡಲಾಗುತ್ತಿದೆ.

| ವಿವರ | ಮಾಜಿ ಕುಸ್ತಿ ಪೈಲ್ವಾನರುಗಳಿಗೆ ನೀಡಲಾಗುತ್ತಿರುವ ಮಾಸಾಶನದ ವಿವರ | ಮಾಜಿ ಕುಸ್ತಿಯೇತರ ಕ್ರೀಡಾಪಟುಗಳಿಗೆ ನೀಡಲಾಗುತ್ತಿರುವ ಮಾಸಾಶನದ ವಿವರ |
|---|---|---|
| ರಾಜ್ಯ ಮಟ್ಟ | ರೂ 2,500/- | ರೂ 1,000/- |
| ರಾಷ್ಟ್ರಮಟ್ಟ | ರೂ 3,000/- | ರೂ 1,500/- |
| ಅಂತರ-ರಾಷ್ಟ್ರೀಯ ಮಟ್ಟ | ರೂ 4,000/- | ರೂ 2,000/- |

9. ಯುವ ಸಂಘಗಳಿಗೆ 'ಯುವ ಚೈತನ್ಯ' ಕಾರ್ಯಕ್ರಮದಡಿ ಕ್ರೀಡಾ ಕಿಟ್ ಗಳನ್ನು ವಿತರಿಸಲಾಗುತ್ತಿದೆ.
10. ಪರಿಶಿಷ್ಟ ಜಾತಿ ಮತ್ತು ಪಂಗಡದ ಸಾಧಕ ಕ್ರೀಡಾಪಟುಗಳಿಗೆ ವಿಶೇಷ ನಗದು ಪುರಸ್ಕಾರ ವಿತರಿಸಲಾಗುತ್ತಿದೆ. ಅಂತರ-ರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಕ್ರೀಡಾಕೂಟಗಳ ಪದಕ ವಿಜೇತರಿಗೆ ಕ್ರಮವಾಗಿ ತಲಾ ರೂ 5.00, 3.00 ಮತ್ತು 1.00 ಲಕ್ಷಗಳ ನಗದು ಪುರಸ್ಕಾರ ನೀಡಲಾಗುತ್ತಿದೆ.

11. ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ ಪ್ರವೇಶ ಪಡೆಯುವ ಪ್ರತಿಭಾವಂತ ಯುವ ಕ್ರೀಡಾಪಟುಗಳಿಗೆ ಉಚಿತ ಊಟೋಪಹಾರ, ವಸತಿ, ಕ್ರೀಡಾ ತರಬೇತಿ ಮತ್ತು ಕ್ರೀಡಾ ಸಮವಸ್ತ್ರ ಒದಗಿಸಲಾಗುತ್ತಿದೆ. ದೈಹಿಕ ಕ್ಷಮತಾ ಪರೀಕ್ಷೆಗಳಲ್ಲಿ ಹಾಗೂ ಕ್ರೀಡಾ ಕೌಶಲ್ಯ ಪರೀಕ್ಷೆ ಆಧಾರಿತವಾಗಿ 5ನೇ ತರಗತಿ ಮೇಲ್ಪಟ್ಟ ಕ್ರೀಡಾಪಟುಗಳಿಗೆ ಆಯ್ಕೆ ಪ್ರಕ್ರಿಯೆ ನಡೆಸಿ, ಪ್ರವೇಶಾವಕಾಶ ಕಲ್ಪಿಸಲಾಗುತ್ತಿದೆ.
12. **<u>ಕ್ರೀಡಾ ಮೂಲಸೌಕರ್ಯಗಳ ಸೃಜನೆ:</u>** ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ನಿವೇಶನಗಳಲ್ಲಿ ಕ್ರಿಡಾ ಮೂಲಸೌಕರ್ಯಗಳನ್ನು ಸೃಜಿಸುವ ಮೂಲಕ ಕ್ರೀಡಾಪಟುಗಳ ಕ್ರೀಡಾ ತರಬೇತಿಗೆ ಉತ್ತೇಜನ ನೀಡಲಾಗುತ್ತಿದೆ.
13. **<u>ಗರಡಿ ಮನೆ ನಿರ್ಮಾಣ:</u>** ಗ್ರಾಮೀಣ ಕುಸ್ತಿ ಕ್ರೀಡಾಪಟುಗಳಿಗೆ ಉತ್ತೇಜನ ನೀಡುವ ಸಲುವಾಗಿ ಗರಡಿ ಮನೆ ನಿರ್ಮಾಣ ಮತ್ತು ನವೀಕರಣಕ್ಕೆ ಆದ್ಯತೆ ನೀಡಲಾಗುತ್ತಿದೆ.
14. **<u>ನಮ್ಮೂರ ಶಾಲೆಗೆ ನಮ್ಮ ಯುವಜನರು:</u>** ಈ ಕಾರ್ಯಕ್ರಮದಡಿ ಕ್ರೀಡಾ ಕ್ಷೇತ್ರದಡಿ ಸಾಧನೆ ಮಾಡಿದ ಸರಕಾರಿ ಶಾಲೆಗಳು ಕ್ರೀಡಾ ಚಟುವಟಿಕೆಗಳ ಪ್ರೋತ್ಸಾಹಕ್ಕಾಗಿ ಕ್ರೀಡಾ ಸಾಮಗ್ರಿಗಳನ್ನು ಪೂರೈಸಿಕೊಳ್ಳಲು ಪ್ರೋತ್ಸಾಹಧನ ಮತ್ತು ದೈಹಿಕ ಶಿಕ್ಷಕರ ಗೌರವಧನ ನೀಡಲಾಗುವುದು.
15. **<u>ಯುವ ಕ್ರೀಡಾ ಮಿತ್ರ :</u>** ಗ್ರಾಮೀಣ ಭಾಗಗಳಲ್ಲಿ ಯುವಜನ ಚಟುವಟಿಕೆಗೆ ಉತ್ತೇಜನ ನೀಡಿ, ಕ್ರೀಡಾ ಸಂಸ್ಕೃತಿಯನ್ನು ಬೆಳೆಸಲು ಕ್ರೀಡಾ ಸಂಘಗಳಿಗೆ ಕ್ರೀಡಾ ಸಲಕರಣೆ ನೀಡಲಾಗುವುದು.
16. **<u>ಗ್ರಾಮೀಣ ಕ್ರೀಡೋತ್ಸವ:</u>** ಗ್ರಾಮೀಣ ಪ್ರದೇಶದಲ್ಲಿ ದೇಸಿ ಕ್ರೀಡೆಗಳನ್ನು ಸ್ಥಳೀಯ ಮಟ್ಟದಲ್ಲಿ ಪ್ರೋತ್ಸಾಹಿಸಲು ಕಾರ್ಯಕ್ರಮಗಳ ಆಯೋಜನೆ.
17. **<u>ಯುವ ಶಕ್ತಿ ಕೇಂದ್ರ :</u>** ಯುವಜನರ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸಲು ಇಲಾಖಾ ಕ್ರೀಡಾಂಗಣಗಳು, ಕ್ರೀಡಾ ವಸತಿ ನಿಲಯಗಳು ಮತ್ತು ಸರ್ಕಾರಿ ಕಾಲೇಜುಗಳಿಗೆ ಜಿಮ್ ಉಪಕರಣಗಳನ್ನು ಒದಗಿಸಲಾಗುವುದು.
18. **<u>ಯುವಜನ ಮೇಳ :</u>** ಯುವಜನರು ಜಾನಪದ ಕಲೆಯನ್ನು ಉಳಿಸಿ, ಬೆಳೆಸಲು ಪೂರಕವಾಗುವಂತೆ 17 ವಿವಿಧ ಪ್ರಕಾರಗಳ ಜನಪದ ಸ್ಪರ್ಧೆಗಳನ್ನು ಜಿಲ್ಲಾ, ವಿಭಾಗ ಮತ್ತು ರಾಜ್ಯ ಮಟ್ಟದಲ್ಲಿ ಆಯೋಜಿಸುವುದು.
19. **<u>ಯುವಜನೋತ್ಸವ:</u>** ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳನ್ನು ಆಯೋಜಿಸಿ, ರಾಜ್ಯ ಮಟ್ಟದ ವಿಜೇತರನ್ನು ಸ್ವಾಮಿ ವಿವೇಕಾನಂದರ ಜನ್ಮದಿನೋತ್ಸವದ ಅಂಗವಾಗಿ ನಡೆಯುವ ರಾಷ್ಟ್ರೀಯ ಯುವಜನೋತ್ಸವಕ್ಕೆ ನಿಯೋಜಿಸುವುದು.
20. **<u>ಯುವಜನ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ :</u>** ಯುವಜನರಿಗಾಗಿ ಜನಪದ ಕಲೆಗಳು, ಸಾಂಸ್ಕೃತಿಕ ಸ್ಪರ್ಧೆಗಳ ಬಗ್ಗೆ ಹೆಚ್ಚಿನ ತರಬೇತಿ ನೀಡಲು ಯುವಜನ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ ಕಾರ್ಯಕ್ರಮವನ್ನು ಆಯೋಜಿಸಲಾಗುತ್ತಿದೆ.
21. ಮಾನ್ಯತೆ ಪಡೆದ ರಾಜ್ಯ ಕ್ರೀಡಾ ಸಂಸ್ಥೆಗಳಿಗೆ ಕ್ರೀಡಾಕೂಟಗಳ ಆಯೋಜನೆ, ತರಬೇತಿ ಶಿಬಿರಗಳ ಆಯೋಜನೆ ಹಾಗೂ ಕ್ರೀಡಾಕೂಟಗಳಿಗೆ ರಾಜ್ಯ ತಂಡದ ನಿಯೋಜನೆಗೆ ಅನುದಾನ ನೀಡಲಾಗುತ್ತಿದೆ.
22. ಯುವಜನರಿಗೆ ಸಾಹಸ ಕ್ರಿಡಾ ಪ್ರಶಿಕ್ಷಕರಾಗಲು ವಿವಿಧ ಹಂತಗಳ ತರಬೇತಿಯನ್ನು ನೀಡಲಾಗುತ್ತಿದೆ.
23. ರಾಷ್ಟ್ರೀಯ ಸೇವಾ ಯೋಜನೆ ಮೂಲಕ ನಿಮ್ಹಾನ್ಸ್ ಸಂಸ್ಥೆಯ ಸಹಯೋಗದೊಂದಿಗೆ ಜೀವನ ಕೌಶಲ್ಯ ತರಬೇತಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

## ಅನುಬಂಧ-2

## ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಮತ್ತು ಗ್ರಾಮಗಳಲ್ಲಿ 2016-17 ರಿಂದ ಇಲಾಖೆಯ ವತಿಯಿಂದ ಕೈಗೊಳ್ಳಲಾಗಿರುವ ಯೋಜನೆಗಳ ವಿವರ

1. ಕಲ್ಯಾಣ-ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮಂಡಳಿ (ಕೆ.ಕೆ.ಆರ್.ಡಿ.ಬಿ) ವತಿಯಿಂದ ಹಡಗಲಿ ಕ್ರೀಡಾಂಗಣದಲ್ಲಿ ಗ್ಯಾಲರಿ ಮತ್ತು ಮೇಲ್ಚಾವಣಿ ಕಾಮಗಾರಿ ರೂ.100-00 ಲಕ್ಷಗಳಲ್ಲಿ ಕೈಗೊಳ್ಳಲಾಗಿದೆ.
2. ಇಲಾಖೆ ವತಿಯಿಂದ ಕೂಡ್ಲಿಗಿ ಪಟ್ಟಣದಲ್ಲಿ ಮಹಾದೇವ ಮೈಲಾರ ಕ್ರೀಡಾಂಗಣಕ್ಕೆ ರೂ.25.00 ಲಕ್ಷ ಅನುದಾನದಲ್ಲಿ ಕಾಂಪೌಂಡ್ ಗೋಡೆ ನಿರ್ಮಿಸಲಾಗಿರುತ್ತದೆ.
3. ಕೂಡ್ಲಿಗಿ ಪಟ್ಟಣದಲ್ಲಿ ರೂ.10-00 ಲಕ್ಷಗಳಲ್ಲಿ ಗರಡಿ ನಿರ್ಮಾಣ ಮಾಡಲು ಅನುದಾನ ಮಂಜೂರಾಗಿದೆ. ಕಾಮಗಾರಿ ಶೀಘ್ರದಲ್ಲಿ ಕೈಗೊಳ್ಳಬೇಕಾಗಿದೆ.
4. ಕೆ.ಕೆ.ಆರ್.ಡಿ.ಬಿ. ಅನುದಾನದಲ್ಲಿ ಜಿಲ್ಲಾ ಕ್ರೀಡಾಂಗಣದಿಂದ ಮುಖ್ಯ ರಸ್ತೆವರೆಗೆ ಡಾಂಬರೀಕರಣ ರಸ್ತೆಯನ್ನು ರೂ. 100-00 ಲಕ್ಷಗಳಲ್ಲಿ ಕೆ.ಆರ್.ಡಿ.ಎಲ್ ವತಿಯಿಂದ ಕಾಮಗಾರಿ ಪೂರ್ಣಗೊಂಡಿದೆ.
5. ಜಿಲ್ಲಾ ಪಂಚಾಯತ್ ಅನುದಾನದಲ್ಲಿ ಜಿಲ್ಲಾ ಕ್ರೀಡಾಂಗಣದಲ್ಲಿ ರೂ. 2638 ಲಕ್ಷಗಳಲ್ಲಿ 4 ಹೈ-ಮಾಸ್ಟ್ ದೀಪಗಳನ್ನು ಅಳವಡಿಸಲಾಗಿದೆ.
6. ಜಿಂದಾಲ್ ಅನುದಾನದಿಂದ ಜಿಲ್ಲಾ ಕ್ರೀಡಾಂಗಣದ 100 ಮೀಟರ್ ಸಿಟ್ಟಿಂಗ್ ಗ್ಯಾಲರಿ ಮತ್ತು ಮೇಲ್ಚಾವಣಿ ಕಾಮಗಾರಿ ಪ್ರಗತಿಯಲ್ಲಿದೆ.
7. ಕೆ.ಕೆ.ಆರ್.ಡಿ.ಬಿ. ಮತ್ತು ಎಸ್.ಎಂ.ಡಿ.ಸಿ. ಅನುದಾನದಿಂದ ಈ ಕೆಳಕಂಡ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರದವರಿಂದ ಕೈಗೊಳ್ಳಲಾಗಿದೆ:

| ಕ್ರಸ | ಕಾಮಗಾರಿ ವಿವರ | ಅಂದಾಜು ವೆಚ್ಚ (ರೂ ಲಕ್ಷಗಳಲ್ಲಿ) | ಈವರೆಗೆ ಬಿಡುಗಡೆಯಾದ ಅನುದಾನ (ರೂ ಲಕ್ಷಗಳಲ್ಲಿ) | ಪ್ರಸ್ತುತ ಹಂತ |
|---|---|---|---|---|
| 1 | ಸಂಡೂರು ತಾಲ್ಲೂಕು ಕ್ರೀಡಾಂಗಣದಲ್ಲಿ ಅಥ್ಲೆಟಿಕ್ ಟ್ರ್ಯಾಕ್ ನಿರ್ಮಾಣ | 48.79 | 46.43 | ಕಾಮಗಾರಿ ಅಂತಿಮ ಹಂತದಲ್ಲಿದೆ. |
| 2 | ಸಂಡೂರು ತಾಲ್ಲೂಕು ಕ್ರೀಡಾಂಗಣದಲ್ಲಿ ಆರ್.ಸಿ.ಸಿ. ಚರಂಡಿ ನಿರ್ಮಾಣ | 18.31 | 10.30 | ಕಾಮಗಾರಿ ಮುಕ್ತಾಯಗೊಂಡಿದೆ. |
| 3 | ಸಂಡೂರು ತಾಲ್ಲೂಕು ಕ್ರೀಡಾಂಗಣದಲ್ಲಿ ಆವರಣ ಗೋಡೆ ನಿರ್ಮಾಣ | 61.22 | 3.10 | ಅಡಿಪಾಯ ಕಾಮಗಾರಿ ಪ್ರಗತಿಯಲ್ಲಿದೆ. |
| | ಒಟ್ಟು | 128.32 | 59.83 | |

8. ಜಿಲ್ಲಾ ಪಂಚಾಯತ್ ವಲಯದಿಂದ 2016-17 ನೇ ಮತ್ತು 2017-18 & 2019-20 ನೇ ಸಾಲಿನಲ್ಲಿ ತಾಲ್ಲೂಕು ಮಟ್ಟದ ದಸರಾ ಕ್ರೀಡಾಕೂಟ, ಜಿಲ್ಲಾ ಮಟ್ಟದ ದಸರಾ ಕ್ರೀಡಾಕೂಟ, ವಿಭಾಗ ಮಟ್ಟದ ದಸರಾ ಕ್ರೀಡಾಕೂಟ ಸಂಘಟನೆ ಮತ್ತು ರಾಜ್ಯ ಮಟ್ಟದ ದಸರಾ ಕ್ರೀಡಾಕೂಟದಲ್ಲಿ ಭಾಗವಹಿಸಿದ ಕ್ರೀಡಾಪಟುಗಳಿಗೆ ನಿಯಮಾನುಸಾರ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನೀಡಲು ವಿನಿಯೋಗಿಸಿದೆ.
9. ಜಿಲ್ಲಾ ಪಂಚಾಯತ್ ವಲಯದಿಂದ 2016-17 ನೇ ಮತ್ತು 2017-18 & 2019-20 ನೇ ಸಾಲಿನಲ್ಲಿ ಯುವಜನಮೇಳ ಮತ್ತು ಯುವಜನೋತ್ಸವ ಕಾರ್ಯಕ್ರಮ ಸಂಘಟನೆ, ಭಾಗವಹಿಸಿದವರಿಗೆ ನಿಯಮಾನುಸಾರ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನೀಡಲು ವಿನಿಯೋಗಿಸಿದೆ.
10. ಜಿಲ್ಲಾ ಪಂಚಾಯತ್ ವಲಯದಿಂದ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಹೆಚ್ಚಿನ ಪ್ರತಿಭಾವಂತ ಕ್ರೀಡಾಪಟುಗಳು ಹೊಂದಿದ ಶಾಲೆಗಳಿಗೆ ಕ್ರೀಡಾ ಸಾಮಾಗ್ರಿ ಖರೀದಿಗಾಗಿ ಸರ್ಕಾರಿ ಪ್ರೌಢಶಾಲೆಗಳಿಗೆ ತಲಾ ರೂ. 5000-00 ರಂತೆ 59 ಶಾಲೆಗಳಿಗೆ ವಿತರಿಸಲಾಗಿದೆ.
11. ಜಿಲ್ಲಾ ಪಂಚಾಯತ್ ವಲಯದಿಂದ ಜಿಲ್ಲೆಯಿಂದ ರಾಜ್ಯ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಿ ಪದಕ ಪಡೆದ ಕ್ರೀಡಾಪಟುಗಳಿಗೆ ರೂ. 10,000-00 ಪ್ರೋತ್ಸಾಹಧನದಂತೆ ಒಟ್ಟು 20 ಜನ ಕ್ರೀಡಾಪಟುಗಳಿಗೆ ವಿತರಿಸಲಾಯಿತು ಹಾಗೂ ಟ್ರ್ಯಾಕ್‌ಸೂಟ್ ಖರೀದಿಗಾಗಿ ತಲಾ ರೂ.1000-00 ರಂತೆ ಒಟ್ಟು 60 ಕ್ರೀಡಾಪಟುಗಳಿಗೆ ಸಹಾಯಧನ ವಿತರಿಸಲಾಯಿತು.
12. ರಾಜ್ಯ ವಲಯದಿಂದ 2019-20 ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಹೋಬಳಿ ಮಟ್ಟದಲ್ಲಿ ಗ್ರಾಮೀಣ ಕ್ರೀಡೋತ್ಸವ ಆಯೋಜಿಸಲಾಗಿದೆ.
13. ರಾಜ್ಯ ವಲಯದಿಂದ 2019-20 ನೇ ಸಾಲಿಗೆ ನಮ್ಮೂರ ಶಾಲೆಗೆ, ನಮ್ಮ ಯುವಜನರು ಕಾರ್ಯಕ್ರಮಡಿ ಬಳ್ಳಾರಿ ಜಿಲ್ಲೆಯ 9 ತಾಲ್ಲೂಕಿನ ಆಯ್ದ ಸರ್ಕಾರಿ ಶಾಲೆಗಳಿಗೆ ರೂ. 1-00 ಲಕ್ಷ ದಂತೆ ಅನುದಾನ ಬಿಡುಗಡೆ ಮಾಡಲಾಗಿದೆ.
14. ರಾಜ್ಯ ವಲಯದಿಂದ 2019-20 ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಪರಿಶಿಷ್ಟ ಜಾತಿ ಉಪ ಯೋಜನೆ ಮತ್ತು ಪರಿಶಿಷ್ಟ ಪಂಗಡ ಉಪಯೋಜನೆ ಅಡಿಯಲ್ಲಿ ವಿಶೇಷ ತರಬೇತಿ ಶಿಬಿರ ಕಾರ್ಯಕ್ರಮ ಆಯೋಜಿಸಲಾಗಿದೆ.

15. 2019-20 ನೇ ಸಾಲಿನಲ್ಲಿ ರಾಜ್ಯ ವಲಯದ ಯುವ ಚೈತನ್ಯ ಕಾರ್ಯಕ್ರಮದಡಿಯಲ್ಲಿ ಅರ್ಹ ಯುವಕ / ಯುವತಿ ಸಂಘಗಳಿಗೆ 35 ಕಿಟ್‌ಗಳು, ಕ್ರೀಡಾ ಮಿತ್ರ ಕಾರ್ಯಕ್ರಮದಡಿಯಲ್ಲಿ ಅರ್ಹ ಯುವಕ / ಯುವತಿ ಸಂಘಗಳಿಗೆ 27 ಕಿಟ್‌ಗಳು, ಗ್ರಾಮಾಂತರ ಕ್ರೀಡಾ ಶಾಲೆಗಳಿಗೆ 25 ಕ್ರೀಡಾ ಕಿಟಗಳನ್ನು ವಿತರಿಸಲು ಸ್ವೀಕರಿಸಲಾಗಿದೆ.
16. ರಾಜ್ಯವಲಯದಿಂದ 2019-20 ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಪರಿಶಿಷ್ಟ ಪಂಗಡ ಉಪ ಯೋಜನೆ ಅಡಿಯಲ್ಲಿ ಯುವಜನ ಮೇಳ/ಯುವಜನೋತ್ಸವ ಕಾರ್ಯಕ್ರಮದ ಸ್ಪರ್ದೆಗಳಲ್ಲಿ ಭಾಗವಹಿಸಿ ಪ್ರಶಸ್ತಿ ವಿಜೇತರಿಗೆ ಹಾಗೂ ಯುವಕ/ಯುವತಿ ಸಂಘಕ್ಕೆ ಪ್ರೋತ್ಸಾಹ ಧನ ರೂ.1-00 ಲಕ್ಷ ನೀಡಲಾಗಿದೆ.
17. ರಾಜ್ಯವಲಯದಿಂದ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕಿನ ಕ್ರೀಡಾಪಟುಗಳಿಗೆ ಶಾಲಾ ಶುಲ್ಕ ಮರುಪಾವತಿ ಸಹಾಯ ಧನ ನೀಡಲಾಗಿದೆ.
18. ರಾಜ್ಯ ವಲಯದಿಂದ ರಾಜ್ಯ ಮಟ್ಟದ ಕ್ರೀಡಾ ಕೂಟಗಳಲ್ಲಿ ಭಾಗವಹಿಸಿ ಪದಕ ಪಡೆದ ಬಳ್ಳಾರಿ ಜಿಲ್ಲೆಯ 9 ಕ್ರೀಡಾಪಟುಗಳಿಗೆ ತಲಾ ರೂ. 10,000-00 ರಂತೆ ಕ್ರೀಡಾ ವಿದ್ಯಾರ್ಥಿ ವೇತನ ನೀಡಲಾಗಿದೆ.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1079**

**ಉತ್ತರಿಸಬೇಕಾದ ದಿನಾಂಕ : 23.09.2020**

**ಸದಸ್ಯರ ಹೆಸರು : ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ)**

**ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ರಾಯಚೂರು ಜಿಲ್ಲೆಯ ಯುವ ಸಬಲೀಕರಣ ಮತ್ತು ಕ್ರೀಡಾ ಕ್ಷೇತ್ರದ ಸಾಧನೆಯಲ್ಲಿ ಹಿಂದುಳಿದ ಪ್ರದೇಶವಾಗಿದ್ದು ಅಲ್ಲಿನ ಯುವ ಜನಾಂಗವನ್ನು ಉತ್ತೇಜಿಸಲು ಸರ್ಕಾರದ ಕೈಗೊಂಡ ಕ್ರಮಗಳೇನು | ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ರಾಯಚೂರು ಜಿಲ್ಲೆಯೂ ಒಳಗೊಂಡಂತೆ ರಾಜ್ಯದಲ್ಲಿ ಸರ್ಕಾರವು ಯುವಜನಾಂಗವನ್ನು ಉತ್ತೇಜಿಸಲು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ರೂಪಿಸಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| ಆ | ಕೇಂದ್ರ ಸರ್ಕಾರದ ಪುರಸ್ಕೃತ ಚಟುವಟಿಕೆಗಳನ್ನು ಸ್ಥಳೀಯ ಮಟ್ಟದಲ್ಲಿ ಉತ್ತೇಜಿಸಲು ಜಿಲ್ಲೆಗಳಲ್ಲಿ ಖೇಲೋ ಇಂಡಿಯಾ ಸೆಂಟರ್ ಗಳನ್ನು ಸ್ಥಾಪಿಸಲು ಕರ್ನಾಟಕ ಸರ್ಕಾರದಿಂದ ಯಾವ ಜಿಲ್ಲೆಗಳನ್ನು ಆಯ್ಕೆ ಮಾಡಲಾಗಿದೆ. | ಕೇಂದ್ರ ಸರ್ಕಾರದ ಯುವ ವ್ಯವಹಾರಗಳು ಮತ್ತು ಕ್ರೀಡಾ ಮಂತ್ರಾಲಯದ ಮಾರ್ಗಸೂಚಿಗಳನ್ವಯ ಎಲ್ಲ ಜಿಲ್ಲೆಗಳಲ್ಲಿ ಖೇಲೋ ಇಂಡಿಯಾ ಸೆಂಟರ್ ಗಳನ್ನು ಸ್ಥಾಪಿಸಬೇಕಾಗಿದ್ದು,<br>ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮುಖಾಂತರ ಅರ್ಹ ಕೇಂದ್ರಗಳನ್ನು ಗುರುತಿಸಬೇಕಾಗಿದ್ದು, ಈ ಕಾರ್ಯ ಪ್ರಗತಿಯಲ್ಲಿದೆ. |
| ಇ | ರಾಯಚೂರು ಜಿಲ್ಲೆಯನ್ನು ಖೆಲೋ ಇಂಡಿಯಾ ಸೆಂಟರ್ (ಕೆ.ಐ.ಸಿ)ಗೆ ಆಯ್ಕೆ ಮಾಡಿ ಈ ಭಾಗದ ಯುವ ಜನಾಂಗವನ್ನು ಉತ್ತೇಜಿಸಲು ಸರ್ಕಾರ ಕೂಡಲೇ ಕ್ರಮ ವಹಿಸಲಾಗುವುದೇ ?(ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಕೇಂದ್ರ ಸರ್ಕಾರದ ಯುವ ವ್ಯವಹಾರಗಳು ಮತ್ತು ಕ್ರೀಡಾ ಮಂತ್ರಾಲಯದ ಮಾರ್ಗಸೂಚಿಗಳನ್ವಯ ರಾಯಚೂರು ಜಿಲ್ಲೆಯಲ್ಲಿ ಖೇಲೋ ಇಂಡಿಯಾ ಸೆಂಟರ್ ಗಳನ್ನು ಸ್ಥಾಪಿಸಲು ಅರ್ಹ ಕೇಂದ್ರಗಳನ್ನು ಜಿಲ್ಲಾಧಿಕಾರಿಗಳ ಮುಖೇನ ಗುರುತಿಸುವ ಕಾರ್ಯ ಪ್ರಗತಿಯಲ್ಲಿದೆ. |

**ವೈಎಸ್ ಡಿ-/ಇಬಿಬಿ/82/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಅನುಬಂಧ-1

## ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ರಾಯಚೂರು ಜಿಲ್ಲೆಯು ಸೇರಿದಂತೆ ಯುವ ಜನಾಂಗವನ್ನು ಉತ್ತೇಜಿಸಲು ಸರ್ಕಾರವು ರೂಪಿಸಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳ ವಿವರಗಳು.

* ರಾಜ್ಯದಲ್ಲಿ ಒಟ್ಟು 34 ಕ್ರೀಡಾಶಾಲೆ/ನಿಲಯಗಳಿದ್ದು, ಇವುಗಳಿಗೆ ಪ್ರವೇಶ ನೀಡುವ ಸಂಬಂಧ ತಾಲ್ಲೂಕು, ಜಿಲ್ಲಾ, ವಿಭಾಗ ಮತ್ತು ರಾಜ್ಯಮಟ್ಟದಲ್ಲಿ ಆಯ್ಕೆ ಶಿಬಿರಗಳನ್ನು ನಡೆಸಿ ಕ್ರೀಡಾಪಟುಗಳ ದೈಹಿಕ ಕ್ಷಮತೆಯನ್ನು ಪರೀಕ್ಷಿಸಿ ಅರ್ಹ ಕ್ರೀಡಾಪಟುಗಳಿಗೆ ಕ್ರೀಡಾಶಾಲೆ/ನಿಲಯಗಳಿಗೆ ಪ್ರವೇಶ ನೀಡಲಾಗುತ್ತಿದೆ.

* ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಅಧಿಕೃತ ಕ್ರೀಡಾಕೂಟಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿ ಭಾಗವಹಿಸಿ ವಿಜೇತರಾದ ಕ್ರೀಡಾಪಟುಗಳಿಗೆ ನಗದು ಪುರಸ್ಕಾರ, ಶೈಕ್ಷಣಿಕ ಶುಲ್ಕ ಮರುಪಾವತಿ ಹಾಗೂ ಕ್ರಿಡಾ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ.
* ಕರ್ನಾಟಕ ಸ್ಪೋರ್ಟ್ಸ್ ಆಕಾಡೆಮಿ ಫಾರ್ ಎಕ್ಸಲೆನ್ಸ್ ಯೋಜನೆಯಡಿಯಲ್ಲಿ ಪ್ರತಿಭಾನ್ವಿತ ಕ್ರೀಡಾಪಟುಗಳಿಗೆ ಉನ್ನತ ಕ್ರೀಡಾ ತರಬೇತಿಗಾಗಿ ಸಹಾಯಧನ ನೀಡಲಾಗುತ್ತಿದೆ.
* ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಲಾದ ಕ್ರೀಡಾಪಟುಗಳಿಗೆ ಸಿ.ಇ.ಟಿ ಮೂಲಕ ವೃತ್ತಿಪರ ಕೋರ್ಸ್ ಗಳಲ್ಲಿ ಪ್ರವೇಶಕ್ಕೆ ಮೀಸಲಾತಿ ನೀಡಲಾಗುವುದು.

* ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಏಕಲವ್ಯ ಪ್ರಶಸ್ತಿ, ಜೀವಮಾನ ಸಾಧನೆ ಪ್ರಶಸ್ತಿ ಮತ್ತು ನಗದು ಪುರಸ್ಕಾರವನ್ನು ನೀಡಲಾಗುವುದು. ಕ್ರೀಡೆಯನ್ನು ಪ್ರೋತ್ಸಾಹಿಸುತ್ತಿರುವ ಸಂಸ್ಥೆಗಳಿಗೆ ಕ್ರೀಡಾ ಪೋಷಕ ಪ್ರಶಸ್ತಿ ನೀಡಲಾಗುವುದು.

* ದೇಸೀ ಗ್ರಾಮೀಣ ಕ್ರೀಡೆಗಳಲ್ಲಿ ವಿಶೇಷ ಸಾಧನೆ ಮಾಡಿದ ರಾಜ್ಯದ ಗ್ರಾಮೀಣ ಕ್ರೀಡಾ ಪ್ರತಿಭೆಗಳಿಗೆ ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ ಹಾಗೂ ನಗದನ್ನು ನೀಡಿ ಗೌರವಿಸಲಾಗುವುದು.

* ಕೇಂದ್ರ ಸರ್ಕಾರ ಪುರಸ್ಕೃತ ಅರ್ಜುನ, ಧ್ಯಾನಚಂದ, ದ್ರೋಣಾಚಾರ್ಯ ಹಾಗೂ ರಾಜೀವ್ ಗಾಂಧಿ ಖೇಲ್ ರತ್ನ ಪ್ರಶಸ್ತಿಗಳಿಗೆ ಇಲಾಖೆಯಿಂದ ಶಿಫಾರಸ್ಸು ಮಾಡಲಾಗುವುದು. ಸದರಿ ಪ್ರಶಸ್ತಿ ಪುರಸ್ಕೃತರಾದ ರಾಜ್ಯದ ಕ್ರೀಡಾಪಟುಗಳಿಗೆ ಉಚಿತ ಬಸ್ ಪಾಸ್ ಸೌಲಭ್ಯವನ್ನು ನೀಡಲಾಗುತ್ತಿದೆ.

* ಖೇಲೋ ಇಂಡಿಯಾ ಯೋಜನೆ: ಕೇಂದ್ರ ಸರ್ಕಾರದ ಖೇಲೋ ಇಂಡಿಯಾ ಯೋಜನೆಯಡಿಯಲ್ಲಿ ಕ್ರೀಡಾಕೂಟಗಳ ಸಂಘಟನೆ, ನಗರ ಪ್ರದೇಶಗಳಲ್ಲಿ ಕ್ರೀಡಾ ಮೂಲಭೂತ ಸೌಕರ್ಯಗಳ ನಿರ್ಮಾಣ ಹಾಗೂ ಕ್ರೀಡಾ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹ ನೀಡಲಾಗುತ್ತಿದೆ. "ಖೇಲೋ ಇಂಡಿಯಾ" ಯೋಜನೆಯನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು ಶೇ.100% ರಷ್ಟು ಅನುದಾನವನ್ನು ನೀಡುತ್ತಿದೆ.
* ರಾಜ್ಯ, ರಾಷ್ಟ್ರ ಹಾಗೂ ಅಂತಾರಾಷ್ಟ್ರ ಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ಸಾಧನೆಗೈದ, 50 ವರ್ಷಕ್ಕಿಂತ ಹೆಚ್ಚು ವಯೋಮಾನದ ಪ್ರಸ್ತುತ ಸಂಕಷ್ಟ ಪರಿಸ್ಥಿತಿಯಲ್ಲಿರುವ ಮಾಜಿ ಕ್ರೀಡಾಪಟುಗಳಿಗೆ ಇಲಾಖೆಯಿಂದ ಮಾಸಾಶನವನ್ನು ನೀಡಲಾಗುತ್ತಿದೆ.

ಯುವಜನ ಮೇಳ : ಗ್ರಾಮೀಣ ಸ್ಥಳೀಯ ಮಟ್ಟದ ಯುವಜನರು ಜನಪದವನ್ನು ಉಳಿಸಿ ಬೆಳೆಸಲು 17 ವಿವಿಧ ಪ್ರಕಾರಗಳ ಜನಪದ ಸ್ಪರ್ಧೆಗಳನ್ನು ಜಿಲ್ಲಾ, ವಿಭಾಗ ಮತ್ತು ರಾಜ್ಯ ಮಟ್ಟದವರೆಗೆ ಕಾರ್ಯಕ್ರಮವನ್ನು ಏರ್ಪಡಿಸಲಾಗುತ್ತಿದೆ.

*ಯುವಜನೋತ್ಸವ : ಕೇಂದ್ರ ಸರಕಾರದ ಕಾರ್ಯಕ್ರಮವಾದ ಯುವಜನೋತ್ಸವವನ್ನು ರಾಜ್ಯದಲ್ಲಿ ಜಿಲ್ಲಾ ಮತ್ತು ರಾಜ್ಯ ಮಟ್ಟದವರೆಗೆ ಆಯೋಜಿಸಿ ರಾಜ್ಯ ಮಟ್ಟದ ವಿಜೇತರನ್ನು ಸ್ವಾಮಿ ವಿವೇಕಾನಂದರ ಜನ್ಮದಿನೋತ್ಸವದ ಅಂಗವಾಗಿ ನಡೆಯುವ ರಾಷ್ಟ್ರ ಮಟ್ಟಕ್ಕೆ ರಾಜ್ಯದ ತಂಡವನ್ನು ನಿಯೋಜಿಸಲಾಗುವುದು.

* ಯುವಜನ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ: ಯುವಜನರಿಗಾಗಿ ಜನಪದ ಕಲೆಗಳು, ಸಾಂಸ್ಕೃತಿಕ ಸ್ಪರ್ಧೆಗಳ ಬಗ್ಗೆ ಹೆಚ್ಚಿನ ತರಬೇತಿ ನೀಡಲು ಯುವಜನ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ ಕಾರ್ಯಕ್ರಮವನ್ನು ಆಯೋಜಿಸಲಾಗುತ್ತಿದೆ.

*ಯುವ ಸಬಲೀಕರಣ ಕೇಂದ್ರ : ಯುವಜನರು ಒಂದೆಡೆ ಸೇರಲು ಅವಕಾಶ ಮಾಡಿಕೊಟ್ಟು ಅಮೂಲ್ಯ ಸಮಯವನ್ನು ಗುಣಾತ್ಮಕವಾಗಿ ಸದುಪಯೋಗಪಡಿಸಿಕೊಳ್ಳುವ ಮೂಲಕ ಅವರ ಬಹುಮುಖಿ ಬುದ್ಧಿಶಕ್ತಿ, ಜ್ಞಾನ, ಕೌಶಲ್ಯ, ದೃಷ್ಟಿಕೋನ, ವಿಚಾರ ಶಕ್ತಿ, ದೂರದರ್ಶಿತ್ವವನ್ನು ವಿಸ್ತಾರಗೊಳಿಸಿಕೊಳ್ಳಲು ವೇದಿಕೆ ಒದಗಿಸಲು ಅವಕಾಶ ಕಲ್ಪಿಸಿದೆ.

* ಜೀವನ ಕೌಶಲ್ಯ ಅಭಿವೃದ್ಧಿ ತರಬೇತಿ : ಯುನಿಸೇಫ್, ಯುನೆಸ್ಕೋ ಸಂಸ್ಥೆಗಳು ಪಟ್ಟಿ ಮಾಡಿರುವ ಹತ್ತು ಮೂಲ ಜೀವನ ಕೌಶಲ್ಯಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದ್ದು, ಈ ಕಾರ್ಯಕ್ರಮವನ್ನು ರಾಷ್ಟ್ರೀಯ ಸೇವಾ ಯೋಜನೆ ಘಟಕದ ಮೂಲಕ ನಿಮ್ಹಾನ್ಸ್ ಸಂಸ್ಥೆಯ ಸಹಯೋಗದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

· ಯುವ ಸ್ಪಂದನ ಕಾರ್ಯಕ್ರಮವನ್ನು 'ನಿಮ್ಹಾನ್ಸ್ ಸಂಸ್ಥೆಯ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದ್ದು, ಯುವಜನರಿಗೆ ಮಾನಸಿಕ ಆರೋಗ್ಯ ಸೇವೆಗಳನ್ನು ಒದಗಿಸಲಾಗುತ್ತಿದೆ.

• ನಮ್ಮೂರ ಶಾಲೆಗೆ ನಮ್ಮ ಯುವಜನರು: ಈ ಕಾರ್ಯಕ್ರಮದಡಿ ಕ್ರೀಡಾ ಕ್ಷೇತ್ರದಡಿ ಸಾಧನೆ ಮಾಡಿದ ಸರಕಾರಿ ಶಾಲೆಗಳು ಕ್ರೀಡಾ ಚಟುವಟಿಕೆಗಳ ಪ್ರೋತ್ಸಾಹಕ್ಕಾಗಿ ಪ್ರೋತ್ಸಾಹಧನ ನೀಡಲಾಗುವುದು.

* ಯುವ ಕ್ರೀಡಾ ಮಿತ್ರ : ಯುವಜನರ ಚಟುವಟಿಕೆಗೆ ಇಲಾಖೆಯ ವತಿಯಿಂದ ಯುವ ಕ್ರೀಡಾ ಮಿತ್ರ ಕಾರ್ಯಕ್ರಮದಡಿ ಗ್ರಾಮೀಣ ಭಾಗಗಳಲ್ಲಿ ಕ್ರೀಡಾ ಸಂಸ್ಕೃತಿಯನ್ನು ಬೆಳೆಸಲು ಕ್ರೀಡಾ ಸಂಘಗಳಿಗೆ ಕ್ರೀಡಾ ಸಲಕರಣೆ ನೀಡುವುದು.

* ಯುವ ಚೈತನ್ಯ : ಯುವ ಚೈತನ್ಯ ಕಾರ್ಯಕ್ರಮದಡಿ ಗ್ರಾಮದಲ್ಲಿ ಯುವಜನರನ್ನು ಕ್ರೀಡಾ ಚಟುವಟುಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಲು ಅಗತ್ಯ ಕ್ರೀಡಾ ಕಿಟ್ ಪೂರೈಸುವುದು.

* ಯುವ ಶಕ್ತಿ ಸಂಘ : ಯುವಜನರು ಗ್ರಾಮ ಮಟ್ಟದಲ್ಲಿ ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಪ್ರೋತ್ಸಾಹಿಸಲು ತಲಾ ರೂ. 5.00 ಲಕ್ಷದಂತೆ ಸುತ್ತುನಿಧಿ ನೀಡುವುದು.

* ಗ್ರಾಮೀಣ ಕ್ರೀಡೋತ್ಸವ : ಗ್ರಾಮೀಣ ಪ್ರದೇಶದಲ್ಲಿ ದೇಸಿ ಕ್ರೀಡೆಗಳನ್ನು ಸ್ಥಳೀಯ ಮಟ್ಟದಲ್ಲಿ ಪ್ರೋತ್ಸಾಹಿಸಲು ಅನುದಾನವನ್ನು ನೀಡುವುದು.

* ಯುವಶಕ್ತಿ ಕೇಂದ್ರ : ಯುವಜನರ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸಲು ಜಿಮ್ ಉಪಕರಣಗಳನ್ನು ನೀಡುವುದು.

* ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿಯ ವತಿಯಿಂದ ಭೂ ಸಾಹಸ, ಜಲಸಾಹಸ, ಹಾಗೂ ವಾಯು ಸಾಹಸ ಕಾರ್ಯಕ್ರಮಗಳನ್ನು ಸಂಘಟಿಸಲಾಗುತ್ತಿದೆ.

* ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಅಡಿಯಲ್ಲಿ ಪರಿಶಿಷ್ಟ ಜಾತಿ/ ಪಂಗಡದ ಯುವಜನರಿಗೆ/ಕ್ರೀಡಾಪಟುಗಳಿಗೆ ಪ್ರೋತ್ಸಾಹಧನ, ಕ್ರೀಡಾ ವಿಜ್ಞಾನ ಕೇಂದ್ರದ ಸೇವೆಯನ್ನು ಪಡೆದವರಿಗೆ ಮರು ಪಾವತಿ ಸೌಲಭ್ಯ, ಜಿಮ್ ಸ್ಥಾಪನೆಗಾಗಿ ಸಹಾಯಧನ ನೀಡಲಾಗುತ್ತಿದೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1104

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಯುವಜನ ಸೇವಾ ಕ್ರೀಡಾ ಇಲಾಖೆಗೆ ನಿಗದಿಪಡಿಸಿದ ವಾರ್ಷಿಕ ಅನುದಾನವೆಷ್ಟು; ಇದರಲ್ಲಿ ಎಷ್ಟು ಬಿಡುಗಡೆಯಾಗಿದೆ. : ಎಷ್ಟು ಖರ್ಚಾಗಿದೆ : ಹಾಗೂ ಯಾವುದಕ್ಕೆ ವಿನಿಯೋಗಿಸಲಾಗಿದೆ (ಕಳೆದ 3 ವರ್ಷಗಳ ವಿವರ ನೀಡುವುದು) | ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ವರ್ಷವಾರು ಕ್ರೀಡಾ ಇಲಾಖೆಗೆ ಖರ್ಚಾಗುವ ಅನುದಾನವೆಷ್ಟು ; ಯುವಜನ ಸೇವೆ (ಯುವಕ - ಯುವತಿಯರ) ಕಾರ್ಯಕ್ರಮಗಳಿಗೆ ನಿಗದಿಪಡಿಸಿ ಖರ್ಚಾಗುವ ಅನುದಾನವೆಷ್ಟು ? (ವರ್ಷವಾರು ವಿವರ ನೀಡುವುದು) | ವರ್ಷವಾರು ಕ್ರೀಡಾ ಇಲಾಖೆಗೆ ಖರ್ಚಾಗಿರುವ ಅನುದಾನದ ವಿವರವನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br><br>ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಯುವಜನ ಸೇವೆ (ಯುವಕ - ಯುವತಿಯರ) ಕಾರ್ಯಕ್ರಮಗಳಿಗೆ ಕಾರ್ಯಕ್ರಮವಾರು ನಿಗದಿಪಡಿಸಿದಂತೆ ಖರ್ಚು ಮಾಡಲಾದ ವಿವರಗಳನ್ನು **ಅನುಬಂಧ-2ರಲ್ಲಿ** ನೀಡಲಾಗಿದೆ. |

**ವೈಎಸ್ ಡಿ-/ಇಬಿಬಿ/89/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

## <u>ಅನುಬಂಧ-1</u>

**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಕಳೆದ 3 ವರ್ಷಗಳಿಂದ ನಿಗದಿಪಡಿಸಿರುವ ಅನುದಾನ, ಬಿಡುಗಡೆ ಮತ್ತು ಖರ್ಚಾಗಿರುವ ಅನುದಾನದ ಹಾಗೂ ವಿನಿಯೋಗಿಸಲಾಗಿರುವ ಯೋಜನೆಗಳ ವಿವರ**

(ರೂ.ಲಕ್ಷಗಳಲ್ಲಿ)

| ಕ್ರ.ಸ | ಲೆಕ್ಕ ಶೀರ್ಷಿಕೆ ಮತ್ತು ಯೋಜನೆಯ ಹೆಸರು | 2017-18ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2018-19ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2019-20ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು |
|---|---|---|---|---|---|---|---|---|---|---|
| 1 | 2204-00-001-0-01 ಪ್ರಚಾರ ಅಭಿಯಾನ 051 ಸಾಮಾನ್ಯ ವೆಚ್ಚಗಳು | 25.00 | 25.00 | 0.85 | 10.00 | 10.00 | 4.91 | 3.00 | 3.00 | 2.37 |
| 2 | 2204-00-001-0-03 ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರಡಿ ಬಳಕೆಯಾಗದೆ ಇರುವ ಮೊತ್ತ, 422 ಪರಿಶಿಷ್ಟ ಜಾತಿ ಉಪಯೋಜನೆ | 747.00 | 747.00 | 732.82 | 1.00 | 1.00 | 1.00 | 60.00 | 60.00 | 60.00 |
| | 423 ಗಿರಿಜನ ಉಪಯೋಜನೆ | 341.00 | 341.00 | 341.00 | 0.00 | 0.00 | 0.00 | 613.45 | 613.45 | 610.02 |
| | **001-0-03 ಒಟ್ಟು** | **1088.00** | **1088.00** | **1073.82** | **1.00** | **1.00** | **1.00** | **673.45** | **673.45** | **670.02** |
| 3 | 2204-00-001-1-01 ಅಧಿಕಾರಿ / ಸಿಬ್ಬಂದಿ ವರ್ಗದವರ ವೇತನ ಮತ್ತು ಇತರೇ ಭತ್ಯೆಗಳು | 440.00 | 440.00 | 315.81 | 439.00 | 439.00 | 415.45 | 457.00 | 457.00 | 407.14 |
| 4 | 2204-00-003-0-01 ಸೇವೆಯಲ್ಲಿರುವ ಇಲಾಖಾ ಅಧಿಕಾರಿಗಳು ಮತ್ತು ತರಬೇತುದಾರರಿಗೆ ತರಬೇತಿ ಕಾರ್ಯಕ್ರಮಗಳು 015 ಪೂರಕ ವೆಚ್ಚ | 0.00 | 0.00 | 0.00 | 1.00 | 1.00 | 0.71 | 1.00 | 1.00 | 1.00 |
| 5 | 2204-00-102-2-03 ರಾಜ್ಯ/ರಾಷ್ಟ್ರ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಿದ ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ಉತ್ತೇಜಿತ ವಿದ್ಯಾರ್ಥಿ ವೇತನ. | | | | | | | | | |
| | 059 ಇತರೇ ಖರ್ಚು ಅ. ಯುವಜನೋತ್ಸವ | 50.00 | 50.00 | 40.00 | 50.00 | 50.00 | 48.21 | 100.00 | 110.00 | 75.39 |
| | 117 ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ | 125.00 | 125.00 | | 80.00 | 80.00 | 80.00 | | | |
| | 117 ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಉತ್ತಮ ಸಾಧನೆ ಮಾಡುವ ಎಲ್ಲಾ ಕ್ರೀಡಾಪಟುಗಳ ಶೈಕ್ಷಣಿಕ ಶುಲ್ಕ ಮರುಪಾವತಿ | 175.00 | 175.00 | 151.14 | 120.00 | 120.00 | 120.00 | 200.00 | 190.00 | 189.00 |
| | **102-2-03 ಒಟ್ಟು** | **350.00** | **350.00** | **191.14** | **250.00** | **250.00** | **248.21** | **300.00** | **300.00** | **264.39** |
| 6 | 2204-00-103-0-02 059 ರಾಜ್ಯ ಯುವ ಕೇಂದ್ರ | 161.00 | 161.00 | 152.16 | 111.00 | 111.00 | 110.70 | 161.00 | 151.00 | 150.38 |
| 7 | 2204-00-103-0-18 059 ಇತರೇ ಖರ್ಚು, ಅ. ರಾಜ್ಯ ಯುವಜನ ಕೇಂದ್ರದಲ್ಲಿ ಒಳಾಂಗಣ ಚಟುವಟಿಕೆಗಳು | 100.00 | 100.00 | 65.15 | 45.00 | 45.00 | 44.00 | 35.00 | 35.00 | 35.00 |
| | ಆ. ಜಿಲ್ಲಾ ಹಾಗೂ ರಾಜ್ಯಮಟ್ಟದ ಯುವಜನ ಸಮ್ಮೇಳನ ಮತ್ತು ಕಾರ್ಯಾಗಾರ | 70.00 | 70.00 | 30.00 | 55.00 | 55.00 | 38.47 | 15.00 | 15.00 | 5.34 |
| | **103-0-18 ಒಟ್ಟು** | **170.00** | **170.00** | **95.15** | **100.00** | **100.00** | **82.47** | **50.00** | **50.00** | **40.34** |

| ಕ್ರ.ಸ | ಲೆಕ್ಕ ಶೀರ್ಷಿಕೆ ಮತ್ತು ಯೋಜನೆಯ ಹೆಸರು | 2017-18ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2018-19ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2019-20ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು |
|---|---|---|---|---|---|---|---|---|---|---|
| 8 | 2204-00-103-0-27 ಯುವ ನೀತಿ ಅನುಷ್ಠಾನ, ಅ. 059 ಯುವ ಕಾರ್ಯಕ್ರಮ, | | | | | | | | | |
| | ಆ. 059 ನಮ್ಮೂರ ಶಾಲೆಗೆ ನಮ್ಮ ಯುವಜನರು | 3200.00 | 2930.00 | 2478.74 | 1600.00 | 1100.54 | 1031.34 | 1000.00 | 1000.00 | 961.79 |
| | ಇ. 059 ಯುವ ಶಕ್ತಿ ಕೇಂದ್ರ (ಹೊಸ ಯೋಜನೆ) | | | | | | | | | |
| | **103-0-27 ಒಟ್ಟು** | **3200.00** | **2930.00** | **2478.74** | **1600.00** | **1100.54** | **1031.34** | **1000.00** | **1000.00** | **961.79** |
| 9 | 2204-00-103-0-28 051 ಸಾಮಾನ್ಯ ವೆಚ್ಚ, ರಾಜೀವ್ ಗಾಂಧಿ ಖೇಲ್ ಅಭಿಯಾನ್ | 10.00 | 10.00 | 4.93 | 10.00 | 10.00 | 9.98 | 10.00 | 10.00 | 9.95 |
| 10 | 2204-00-104-0-02 015 ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ 015 (ನಗದು ಪ್ರಶಸ್ತಿ) ಪೂರಕ ವೆಚ್ಚಗಳು | 930.10 | 930.10 | 929.19 | 400.00 | 400.00 | 400.00 | 700.00 | 710.00 | 710.00 |
| | 059 ಇತರೇ ಖರ್ಚು, ಕರ್ನಾಟಕ ಸ್ಪೋರ್ಟ್ಸ್ ಅಕಾಡೆಮಿ ಫಾರ್ ಎಕ್ಸಲೆನ್ಸ್, ಶಾಸಕರ ಕ್ರೀಡಾಕೂಟ | 1550.00 | 1550.00 | 1035.12 | 1200.00 | 1200.00 | 1151.50 | 650.00 | 650.00 | 650.00 |
| | 100 ಧನ ಸಹಾಯ/ಪರಿಹಾರ (ರಾಜ್ಯ ಸರ್ಕಾರಿ ನೌಕರರ ಕ್ರೀಡಾಕೂಟ) | 50.00 | 50.00 | 44.25 | 50.00 | 50.00 | 49.50 | 50.00 | 150.00 | 148.11 |
| | **104-0-02 ಒಟ್ಟು** | **2530.10** | **2530.10** | **2008.56** | **1650.00** | **1650.00** | **1601.00** | **1400.00** | **1510.00** | **1508.11** |
| 11 | 2204-00-104-0-25 ಕ್ರೀಡಾ ಸಂಸ್ಥೆಗಳು ಮತ್ತು ನಿಲಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರ ವೇತನ ಮತ್ತು ಇತರೇ ಭತ್ಯೆಗಳಿಗಾಗಿ. | 107.00 | 107.00 | 84.00 | 73.00 | 73.00 | 78.59 | 98.00 | 98.00 | 85.43 |
| | 051 ಸಾಮಾನ್ಯ ವೆಚ್ಚಗಳು, ಕ್ರೀಡಾ ಶಾಲೆ ಮತ್ತು ನಿಲಯಗಳು | 3400.00 | 3400.00 | 2705.96 | 2000.00 | 2160.00 | 2143.65 | 1700.00 | 1700.00 | 1700.00 |
| | 059 ಇತರೇ ಖರ್ಚು, ಅ. ವಿದ್ಯಾನಗರ ಆವರಣ ಅಭಿವೃದ್ಧಿ | 119.00 | 119.00 | 31.91 | 828.00 | 828.00 | 828.00 | 305.00 | 305.00 | 305.00 |
| | **104-0-25 ಒಟ್ಟು** | **3626.00** | **3626.00** | **2821.87** | **2901.00** | **3061.00** | **3050.24** | **2103.00** | **2103.00** | **2090.43** |
| 12 | 2204-00-104-0-29 059 ಅ. ಕರ್ನಾಟಕ ಕ್ರೀಡಾ ಪ್ರಾದಿಕಾರ, ಇತರೇ ಖರ್ಚು | 2032.00 | 2032.00 | 2032.00 | 1103.00 | 1103.00 | 1103.00 | 1495.00 | 2195.00 | 2195.00 |
| | ಅ. ಕುಂಬಳಗೂಡು ತರಬೇತಿ ಕೇಂದ್ರ ಅಭಿವೃದ್ಧಿ | 35.00 | 35.00 | 13.58 | 20.00 | 20.00 | 14.78 | 30.00 | 30.00 | 27.79 |
| | ಆ. ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಆಕಾಡೆಮಿ | 175.00 | 175.00 | 175.00 | 287.00 | 287.00 | 287.00 | 435.00 | 435.00 | 435.00 |
| | 103 ಸಹಾಯಾನುದಾನ ಸಾಮಾನ್ಯ ವೆಚ್ಚ (ಕಕ್ರೀಪ್ರಾ) | 502.00 | 502.00 | 502.00 | 527.00 | 527.00 | 527.00 | 27.00 | 27.00 | 27.00 |
| | 115 ಸಹಾಯಾನುದಾನ ಗುತ್ತಿಗೆ/ಹೊರಗುತ್ತಿಗೆ (ಕಕ್ರೀಪ್ರಾ) | 0.00 | 0.00 | 0.00 | 0.00 | 0.00 | 0.00 | 778.00 | 778.00 | 778.00 |
| | ಪೂರಕ ವೆಚ್ಚ-3 | 173.50 | 173.50 | 173.50 | 0.00 | 0.00 | 0.00 | 0.00 | 0.00 | 0.00 |
| | ಯುವ ನೀತಿ ಮರು ಹೊಂದಾಣಿಕೆ | 270.00 | 270.00 | 270.00 | 0.00 | 0.00 | 0.00 | 0.00 | 0.00 | 0.00 |
| | **ಒಟ್ಟು 104-0-29** | **3187.50** | **3187.50** | **3166.08** | **1937.00** | **1937.00** | **1931.78** | **2765.00** | **3465.00** | **3462.79** |

| ಕ್ರ.ಸ | ಲೆಕ್ಕ ಶೀರ್ಷಿಕೆ ಮತ್ತು ಯೋಜನೆಯ ಹೆಸರು | 2017-18ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2018-19ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2019-20ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು |
|---|---|---|---|---|---|---|---|---|---|---|
| 13 | 2204-00-104-0-32 ಅ) 059 ಗ್ರಾಮೀಣ ಕ್ರೀಡೆ ಮತ್ತು ಪಂದ್ಯಗಳು, ಇತರೆ ವೆಚ್ಚ | 1630.00 | 1630.00 | 371.26 | 851.55 | 851.55 | 851.55 | 1000.00 | 557.39 | 553.13 |
| | ಹೊಸ ಗರಡಿ ಮನೆ ನಿರ್ಮಾಣಕ್ಕೆ | 250.00 | 250.00 | 235.00 | 352.45 | 352.45 | 342.81 | 150.00 | 150.00 | 140.00 |
| | ಗರಡಿ ಮನೆ ದುರಸ್ತಿ | 10.00 | 10.00 | 0.00 | 0.00 | 0.00 | 0.00 | 59.86 | -- | -- |
| | **104-0-32 ಒಟ್ಟು** | **1890.00** | **1890.00** | **602.26** | **1204.00** | **1204.00** | **1194.36** | **1209.86** | **707.39** | **693.13** |
| 14 | 2204-00-104-0-33 059 ಯುವ ಸಂಜೀವಿನಿ | 25.00 | 25.00 | 0.00 | 10.00 | 7.50 | 0.00 | 3.00 | 3.00 | 2.36 |
| 15 | 2204-00-789-0-01 422 ವಿಶೇಷ ಘಟಕ ಯೋಜನೆ SCP | 2384.00 | 2384.00 | 216.56 | 1812.00 | 1812.00 | 1238.06 | 1178.00 | 1178.00 | 1136.72 |
| 16 | 2204-00-796-0-01 423 ಗಿರಿಜನ ಉಪಯೋಜನೆ TSP | 966.00 | 966.00 | 93.82 | 734.00 | 734.00 | 436.98 | 559.00 | 559.00 | 540.33 |
| 17 | 4202-03-102-0-01 132, ರಾಜ್ಯ ಮಟ್ಟದ ಕ್ರೀಡಾಂಗಣಗಳ ನಿರ್ಮಾಣ. | 500.00 | 500.00 | 499.99 | 2000.00 | 844.73 | 799.10 | 4750.00 | 1750.00 | 1750.00 |
| 18 | 4202-03-102-0-03 386 ಬಂಡವಾಳ ವೆಚ್ಚ | 1869.00 | 1869.00 | 1869.00 | 1500.00 | 1211.80 | 1211.80 | 1900.00 | 2750.00 | 2744.13 |
| | 422 ಪರಿಶಿಷ್ಟ ಜಾತಿ ಉಪಯೋಜನೆ | 105.00 | 105.00 | 0.00 | 80.00 | 80.00 | 80.00 | 80.00 | 80.00 | 77.19 |
| | 423 ಗಿರಿಜನ ಉಪಯೋಜನೆ | 26.00 | 26.00 | 0.00 | 20.00 | 20.00 | 20.00 | 20.00 | 20.00 | 20.00 |
| | **386 ಒಟ್ಟು** | **2000.00** | **2000.00** | **1869.00** | **1600.00** | **1311.80** | **1311.80** | **2000.00** | **2850.00** | **2841.32** |
| 19 | 4202-03-800-0-05 ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರಡಿ ಬಳಕೆಯಾಗದೆ ಇರುವ ಮೊತ್ತ, 423 ಗಿರಿಜನ ಉಪಯೋಜನೆ | 0.00 | 0.00 | 0.00 | 0.00 | 0.00 | 0.00 | 17.33 | 17.33 | 17.33 |
| | **ರಾಜ್ಯ ವಲಯ** | **21547.00** | **22282.60** | **15592.74** | **16370.00** | **14584.57** | **13468.09** | **18640.64** | **16788.17** | **16549.90** |
| | **ಜಿಲ್ಲಾ ಪಂಚಾಯತ್ ವಲಯ** | | | | | | | | | |
| 1 | 2205-00-104-0-26 090 ಕ್ರೀಡಾಕೂಟ ಮತ್ತು ರ್‍ಯಾಲಿಗಳ ಸಂಘಟನೆ ಮತ್ತು ಅದರಲ್ಲಿಭಾಗವಹಿ ಸುವವರಿಗೆ ಪ್ರಯಾಣ ಭತ್ಯೆ, ದಿನ ಭತ್ಯೆ | 874.79 | 874.79 | 756.31 | 1004.53 | 1004.53 | 785.82 | 1058.22 | 1058.22 | 862.71 |
| 2 | 2205-00-104-0-27 090 ನಿರ್ದೇಶನ ಮತ್ತು ಆಡಳಿತ, ಸ.ಯುಸೇ ಕ್ರೀ ಅಧಿಕಾರಿಗಳು | 396.65 | 396.65 | 366.49 | 371.65 | 371.65 | 416.58 | 475.25 | 475.25 | 411.50 |
| 3 | 2205-00-104-0-28 140 ಸಣ್ಣಕಾಮಗಾರಿಗಳು | 1400.18 | 1400.18 | 1305.74 | 1660.81 | 1660.81 | 1539.96 | 1960.34 | 1960.34 | 1740.72 |
| 4 | 2205-00-104-0-29 090 ಕ್ರೀಡಾ ಶಾಲೆ /ವಸತಿ ನಿಲಯಗಳು | 600.54 | 600.54 | 554.80 | 773.41 | 773.41 | 681.82 | 866.81 | 866.81 | 713.08 |
| 5 | 2205-00-104-0-30 100 ಕಷ್ಟಪರಿಸ್ಥಿತಿಯಲ್ಲಿರುವ ಕ್ರೀಡಾ ಪಟುಗಳು/ ಕುಸ್ತಿ ಗಾರರಿಗೆ ಆರ್ಥಿಕ ನೆರವು | 533.32 | 533.32 | 406.29 | 581.22 | 581.22 | 460.25 | 628.88 | 628.88 | 382.84 |

| ಕ್ರ.ಸ | ಲೆಕ್ಕ ಶೀರ್ಷಿಕೆ ಮತ್ತು ಯೋಜನೆಯ ಹೆಸರು | 2017-18ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2018-19ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು | 2019-20ನೇ ಸಾಲಿಗೆ ಆಯವ್ಯಯ ಹಂಚಿಕೆ | ಬಿಡುಗಡೆ | ಖರ್ಚು |
|---|---|---|---|---|---|---|---|---|---|---|
| 6 | 2205-00-104-0-31 090 ಗ್ರಾಮೀಣ ಕ್ರೀಡಾ ಕೇಂದ್ರಗಳು | 219.67 | 219.67 | 187.26 | 279.53 | 279.53 | 263.60. | 326.95 | 326.95 | 263.59 |
| 7 | 2205-00-104-0-32 100 ವಿದ್ಯಾರ್ಥಿಗಳು ಮತ್ತು ವಿದ್ಯಾರ್ಥಿಯೇತರರಿಗೆ ಸಹಾಯ ಧನ ಸಹಾಯ | 64.20 | 64.20 | 52.54 | 68.69 | 68.69 | 56.96 | 73.49 | 73.49 | 55.55 |
| 8 | 2205-00 104-0-33 226 ಕ್ರೀಡಾ ಸಮಾಗ್ರಿಗಳನ್ನು ಕೊಳ್ಳಲು ಮತ್ತು ಆಟದ ಮೈದಾನಗಳನ್ನು ಅಭಿವೃದ್ದಿಗೊಳಿಸಲು ಶೈಕ್ಷಣಿಕ ಮತ್ತು ಇತರೆ ಸಂಸ್ಥೆಗಳಿಗೆ ಸಹಾಯ | 63.13 | 63.13 | 54.13 | 67.55 | 67.55 | 58.62 | 72.27 | 72.27 | 55.51 |
| 9 | 2205-00-104-0-34 090 ಒಳಾಂಗಣ ಕ್ರೀಡಾಂಗಣ ಮತ್ತು ಬಯಲು ರಂಗ ಮಂದಿರ ನಿರ್ಮಾಣಕ್ಕೆ ಅನುದಾನಗಳು | 107.50 | 107.50 | 103.84 | 175.50 | 175.50 | 167.43 | 197.50 | 197.50 | 168.41 |
| 10 | 2205-00-104-0-35 090 ಗ್ರಾಮಾಂತರ ಪ್ರದೇಶಗಳಲ್ಲಿ ಕ್ರೀಡೆಗಳಿಗೆ ಪ್ರೋತ್ಸಾಹ | 32.10 | 32.10 | 23.01 | 34.20 | 34.20 | 23.10 | 36.60 | 36.60 | 26.33 |
| 11 | 2205-00-104-0-36 226 ಕ್ರೀಡಾ ಸಾಮಾಗ್ರಿಗಳ ಖರೀದಿಗಾಗಿ ಜಿಲ್ಲಾ ಮತ್ತು ವಿಭಾಗೀಯ ಯುವಜನ ಸೇವೆಗಳ ಮಂಡಳಿಗೆ ಸಹಾಯ | 32.92 | 32.92 | 7.39 | 35.91 | 35.91 | 26.75 | 39.39 | 39.39 | 30.13 |
| | **ಜಿಲ್ಲಾ ಪಂಚಾಯತ್ ಒಟ್ಟು** | **4326.00** | **4326.00** | **3817.80** | **5053.00** | **5053.00** | **4478.89** | 5735.70 | 5735.70 | 4710.37 |
| | **ಒಟ್ಟು ಮೊತ್ತ** | **25873.00** | 26608.60 | 19410.54 | **21423.00** | 19637.57 | 17946.98 | 24376.34 | 22523.87 | 21260.27 |

## ಅನುಬಂಧ -2

### ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಯುವಜನ ಸೇವೆ (ಯುವಕ - ಯುವತಿಯರ) ಕಾರ್ಯಕ್ರಮಗಳಿಗೆ ಕಾರ್ಯಕ್ರಮವಾರು ನಿಗದಿಪಡಿಸಿದಂತೆ ಖರ್ಚು ಮಾಡಲಾದ ವಿವರ.

| ಕ್ರ. ಸಂ. | ವರ್ಷ | ಕಾರ್ಯಕ್ರಮದ ವಿವರ | ನಿಗದಿಪಡಿಸಿದ ಅನುದಾನ (ರೂ. ಲಕ್ಷಗಳಲ್ಲಿ) | ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|---|---|
| 01. | 2017-18 | ನಮ್ಮೂರ ಶಾಲೆಗೆ ನಮ್ಮ ಯುವಜನರು | 176.00 | 162.00 |
| | | ಯುವ ಸ್ಪಂದನ | 120.00 | 120.00 |
| | | ಯುವ ಕ್ರೀಡಾ ಮಿತ್ರ | 192.25 | 187.92 |
| | | ಯುವ ಚೈತನ್ಯ | 2000.00 | 2000.00 |
| | | ಯುವಜನೋತ್ಸವ | 50.00 | 40.00 |
| | | ಯುವಜನ ಮೇಳ | 40.00 | 40.00 |
| | | ಯುವ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ | 55.00 | 55.00 |
| 02. | 2018-19 | ನಮ್ಮೂರ ಶಾಲೆಗೆ ನಮ್ಮ ಯುವಜನರು | 176.00 | 166.00 |
| | | ಯುವ ಸ್ಪಂದನ | 200.00 | 200.00 |
| | | ಯುವ ಚೈತನ್ಯ | 360.00 | 316.85 |
| | | ಯುವಜನೋತ್ಸವ | 50.00 | 40.00 |
| | | ಯುವಜನ ಮೇಳ | 60.00 | 60.00 |
| | | ಯುವ ಶಕ್ತಿ ಕೇಂದ್ರ | 450.00 | 242.23 |
| | | ಯುವ ಸಹಾಯವಾಣಿ | 200.00 | 199.90 |
| | | ಯುವ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ | 55.00 | 55.00 |
| | | ಕರ್ನಾಟಕ ಕುಸ್ತಿ ಹಬ್ಬ | 200.00 | 200.00 |
| 03. | 2019-20 | ನಮ್ಮೂರ ಶಾಲೆಗೆ ನಮ್ಮ ಯುವಜನರು | 227.00 | 227.00 |
| | | ಯುವ ಸ್ಪಂದನ | 150.00 | 150.00 |
| | | ಯುವ ಚೈತನ್ಯ | 416.00 | 299.70 |
| | | ಯುವಜನೋತ್ಸವ | 50.00 | 50.00 |
| | | ಯುವಜನ ಮೇಳ | 40.00 | 40.00 |
| | | ತೀರ್ಪುಗಾರರ ಕಮ್ಮಟ | 20.00 | 15.00 |
| | | ಗ್ರಾಮೀಣ ಕ್ರೀಡೋತ್ಸವ | 340.50 | 233.00 |
| | | ಯುವ ಕ್ರೀಡಾ ಮಿತ್ರ | 192.25 | 139.45 |
| | | ಕರ್ನಾಟಕ ಕುಸ್ತಿ ಹಬ್ಬ | 200.00 | 200.00 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 620

ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಡ್ರೈವರ್ / ಕಂಡಕ್ಟರ್‌ಗಳು ಪಾಸ್ ಹೊಂದಿರುವ ವಿದ್ಯಾರ್ಥಿಗಳ ವಿಚಾರದಲ್ಲಿ ಉದ್ಧಟತನದಿಂದ ವರ್ತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಹಾಗಿದ್ದಲ್ಲಿ, ವಿದ್ಯಾರ್ಥಿಗಳ ವಿಚಾರದಲ್ಲಿ ಅನುಚಿತ ವರ್ತನೆಗಾಗಿ ಇದುವರೆಗೆ ಜರುಗಿಸಿದ ಕ್ರಮದ ವಿವರಗಳನ್ನು ನೀಡುವುದು; | ವಿದ್ಯಾರ್ಥಿಗಳ ವಿಚಾರದಲ್ಲಿ ಅನುಚಿತ ವರ್ತನೆಗಾಗಿ ಕ.ರಾ.ರ.ಸಾ.ನಿಗಮ, ಬೆಂ.ಮ.ಸಾ.ಸಂಸ್ಥೆ, ವಾ.ಕ.ರ.ಸಾ.ಸಂಸ್ಥೆ ಮತ್ತು ಈ.ಕ.ರ.ಸಾ.ಸಂಸ್ಥೆಗಳಲ್ಲಿ ಇದುವರೆಗೆ ಜರುಗಿಸಿದ ಕ್ರಮದ ವಿವರಗಳನ್ನು **ಅನುಬಂಧ-'ಅ, ಆ, ಇ ಮತ್ತು ಈ'**ರಲ್ಲಿ ನೀಡಲಾಗಿದೆ.<br><br>ಸಾರ್ವಜನಿಕ ಪ್ರಯಾಣಿಕರೊಂದಿಗೆ ಅದರಲ್ಲೂ ವಿಶೇಷವಾಗಿ ವಿದ್ಯಾರ್ಥಿಗಳೊಂದಿಗೆ ಸೌಜನ್ಯದಿಂದ ವರ್ತಿಸುವಂತೆ ಸಂಸ್ಥೆಯ ಎಲ್ಲಾ ಚಾಲನಾ ಸಿಬ್ಬಂದಿಗಳಿಗೆ ಅಗತ್ಯ ತಿಳುವಳಿಕೆ ನೀಡಲಾಗಿರುತ್ತದೆ. |
| ಇ. | ಖಾನಾಪುರ ತಾಲ್ಲೂಕಿನ ಬೇಕ್ವಾಡ ಕ್ರಾಸ್ ಬಸ್ ಡ್ರೈವರ್ ತನ್ನ ಉದ್ಧಟತನದಿಂದ ವಿದ್ಯಾರ್ಥಿಗಳ ಮೇಲೆಯೇ ಬಸ್ ಹಾಯಿಸಲು ಪ್ರಯತ್ನಿಸಿದ್ದಕ್ಕೆ ಯಾವ ಕ್ರಮ ಜರುಗಿಸಿದೆ? | ಖಾನಾಪುರ ತಾಲ್ಲೂಕಿನ ಬೇಕ್ವಾಡ ಕ್ರಾಸ್ ಮಾರ್ಗದಲ್ಲಿ ಕಾರ್ಯಾಚರಣೆಯಾದ ವಾಹನವು ದಾಂಡೇಲಿ ಘಟಕದ್ದಾಗಿದ್ದು, ಈ ಅನುಸೂಚಿ ಕಾರ್ಯಾಚರಣೆಯಲ್ಲಿ ಕರ್ತವ್ಯ ನಿರ್ವಹಿಸಿದ ಚಾಲಕರ ವಿರುದ್ಧ ದಿನಾಂಕಃ 24-09-2019ರಂದು ಪ್ರಕರಣ ದಾಖಲಾಗಿರುತ್ತದೆ ಮತ್ತು ದಿನಾಂಕಃ 25-09-2019ರಂದು ಸದರಿ ಚಾಲಕರನ್ನು ಕರ್ತವ್ಯದಿಂದ ಅಮಾನತ್ತುಗೊಳಿಸಿ ಆದೇಶ ಜಾರಿ ಮಾಡಲಾಗಿದೆ. ಸದರಿಯವರ ಮೇಲೆ ಇಲಾಖಾ ವಿಚಾರಣೆ ಚಾಲ್ತಿಯಲ್ಲಿದ್ದು, ಪ್ರಸ್ತುತ ಸದರಿಯವರನ್ನು ಬೇರೆ ಘಟಕಕ್ಕೆ ಕರ್ತವ್ಯಕ್ಕೆ ನಿಯೋಜಿಸಲಾಗಿದೆ. |

ಸಂಖ್ಯೆ: ಟಿಡಿ 146 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಚಾಲನಾ ಸಿಬ್ಬಂದಿಗಳು ಬಸ್‌ಪಾಸ್ ಹೊಂದಿರುವ ವಿದ್ಯಾರ್ಥಿಗಳ ವಿಚಾರದಲ್ಲಿ ಅನುಚಿತವಾಗಿ ವರ್ತಿಸಿರುವ ಬಗ್ಗೆ ಬಂದಿರುವ ದೂರುಗಳ ಬಗ್ಗೆ ತೆಗದುಕೊಂಡ ಕ್ರಮದ ವಿವರ

### ಅನುಬಂಧ-ಅ
### ಕ.ರಾ.ರ.ಸಾ.ನಿಗಮದ

| ಕ್ರ. ಸಂ | ದೂರು ದಾಖಲಾದ ಜಿಲ್ಲೆ | ದೂರುದಾರರ ಹೆಸರು (ಶ್ರೀಯುತರು) | ಆಪಾದನೆ ಬಂದ ಚಾಲನಾ ಸಿಬ್ಬಂದಿಯ ಹೆಸರು (ಶ್ರೀಯುತರು) | ದೂರಿನ ಸಂಕ್ಷಿಪ್ತ ವಿವರ | ತೆಗದುಕೊಂಡ ಕ್ರಮದ ವಿವರ |
|---|---|---|---|---|---|
| 1 | ರಾಮನಗರ | ಕುಮಾರಿ ಭೂಮಿಕ | ಶಿವಶಂಕರ್. ಚಾಲಕ-ಕಂ-ನಿರ್ವಾಹಕ, ಬಿ.ಸಂ.3343 ಹಾರೋಹಳ್ಳಿ ಘಟಕ | ವಾಹನ ಸಂಖ್ಯೆ ಕೆಎ42ಎಫ್2217ರ ನಿರ್ವಾಹಕರು ಸದರಿ ವಾಹನದಲ್ಲಿ ವಿದ್ಯರ್ಥಿಗಳ ಬಸ್ ಪಾಸ್ ಮಾನ್ಯತೆ ಇಲ್ಲವೆಂದು ಚಲಿಸುತ್ತಿದ್ದ ವಾಹನದಿಂದ ಕೆಳಕೆ ನೂಕಿದ ಕಾರಣ ದೂರುದಾರರು ಗಂಭೀರವಾಗಿ ಗಾಯಗೊಂಡಿರುವ ಬಗ್ಗೆ. | ಸದರಿ ಪ್ರಕರಣದ ಆಪಾದಿತ ನಿರ್ವಾಹಕರನ್ನು ಅಮಾನತ್ತು ಮಾಡಲಾಗಿದೆ. ಪ್ರಕರಣವು ವಿಚಾರಣೆ ಮುಕ್ತಾಯಗೊಂಡಿದ್ದು, ನಿರ್ಣಯ ಹಂತದಲ್ಲಿರುತ್ತದೆ. |
| 2 | ರಾಮನಗರ | ದೇವರಾಜುರವರ ಮಗನಾದ ಅಜಿತ್‌ಗೌಡ.ಡಿ | ಮೋಹನ ಕುಮಾರಿ, ನಿರ್ವಾಹಕಿ, ಬಿ.ಸಂ.1919 ಮಾಗಡಿ ಘಟಕ | ಶ್ರೀ ದೇವರಾಜುರವರ ಮಗನಾದ ಅಜಿತ್‌ಗೌಡ.ಡಿ ಮಾಗಡಿ ರಸ್ತೆಯ ತಿಬ್ಬೆಗೌಡನದೊಡ್ಡಿ(ತಾರೆಮರ) ಬಸ್ ನಿಲ್ದಾಣದಿಂದ ರಾಮನಗರ ಟೌನ್‌ನ ಕಾಲೇಜಿಗೆ ಪ್ರಯಾಣಿಸಿವಾಗ, ನಿರ್ವಾಹಕಿ ವಿದ್ಯಾರ್ಥಿ ಬಸ್ ಪಾಸ್ ಜೊತೆ ಕಾಲೇಜು ಐ.ಡಿ ಬಗ್ಗೆ ವಿಚಾರಿಸುವಾಗ ವಿದ್ಯಾರ್ಥಿಯೊಂದಿಗೆ ಒರಟಾಗಿ ವರ್ತಿಸಿರುವ ಬಗ್ಗೆ | ಈ ಸಂಬಂಧ ದೂರುದಾರರೊಡನೆ ದೂರವಾಣಿ ಮೂಲಕ ಮಾತನಾಡಿ ಅವರ ಸಮ್ಮತಿಯ ಮೇರೆಗೆ ಸದರಿ ನಿರ್ವಾಹಕಿಯವರನ್ನು ವಿಭಾಗೀಯ ಕಛೇರಿಗೆ ಕರೆಯಿಸಿ, ಮೌಖಿಕ ವಿಚಾರಣೆ ಮಾಡಿ, ವಿದ್ಯಾರ್ಥಿಗಳೊಡನೆ ಸೌಜನ್ಯದಿಂದ ನಡೆದುಕೊಳ್ಳುವಂತೆ ಎಚ್ಚರಿಕೆ ನೀಡಲಾಗಿದೆ. |
| 3 | ರಾಮನಗರ | ಸುಷತಿಬ ವಾಂಗ ಚಂಗ್ | ಪ್ರಮೀಳ, ನಿರ್ವಾಹಕಿ, ಬಿ.ಸಂ.1646, ಹಾರೋಹಳ್ಳಿ ಘಟಕ | 15.02.2020 ರಂದು ಹಾರೋಹಳ್ಳಿ ಘಟಕದ ವಾಹನ ಸಂಖ್ಯೆ:ಕೆಎ42 ಎಫ್-2106 ರ ನಿರ್ವಾಹಕಿಯವರು ದೂರುದಾರರ ಪಾಸಿನ ಸಂಖ್ಯೆ:1735716 ರಲ್ಲಿ ಅವರ ಹೆಸರು ಸರಿಯಾಗಿ ನಮೂದಾಗಿಲ್ಲ ಎಂದು ಟಿಕೇಟ್ ವಿತರಿಸಿರುವ ಬಗ್ಗೆ. | ಸದರಿ ನಿರ್ವಾಹಕಿಯವರಿಗೆ ಘಟಕದಲ್ಲಿ ಮೌಖಿಕವಾಗಿ ವಿಚಾರಣೆ ಮಾಡಿ, ಸದರಿ ಪಾಸ್ ಮಾನ್ಯತೆಯಲ್ಲಿದ್ದು, ಮತ್ತೊಮ್ಮೆ ಈ ರೀತಿ ನಡೆದುಕೊಳ್ಳದಂತೆ ಎಚ್ಚರಿಸಲಾಗಿದೆ. |
| 4 | ತುಮಕೂರು | ಜಿ.ಎಸ್. ಉಮೇಶ್ | ಪರಶುರಾಮ, ನಿರ್ವಾಹಕ, ಬಿ.ಸಂಖ್ಯೆ- 7442, ಬೆಂಕೇವಿ-5ನೇ ಘಟಕ, | ದಿನಾಂಕ: 20/09/2019 ರಂದು ವಾಹನ ಸಂಖ್ಯೆ ಕೆಎ 57 ಎಫ್ 1690 ರಲ್ಲಿ ಶ್ರೀ ಜಿಎಸ್. ಉಮೇಶ್ ರವರ ಮಗಳುಬೆಂಗಳೂರು-ಶಿವಮೊಗ್ಗ ಮಾರ್ಗದ ವಾಹನದಲ್ಲಿ ತುಮಕೂರು-ಗುಬ್ಬಿಗೆ ಪ್ರಯಾಣಿಸಲು ವಿದ್ಯಾರ್ಥಿ ರಿಯಾಯಿತಿ ಪಾಸ್ ಹೊಂದಿದ್ದು, ಸದರಿ ಪ್ರಯಾಣಿಕರು ರಾತ್ರಿ 9.00 ಗಂಟೆಯ ಸಮಯದಲ್ಲಿ ಪ್ರಯಾಣ ಮಾಡುತಿದ್ದು, ಸದರಿ ನಿರ್ವಾಹಕರು ವಿದ್ಯಾರ್ಥಿ ಪಾಸನ್ನು ಪರಿಗಣಿಸದೆ ಟಿಕೇಟ್ ವಿತರಿಸಿರುವುದಾಗಿ ದೂರು ಸಲ್ಲಿಸಿರುತ್ತಾರೆ. | ಸದರಿ ನಿರ್ವಾಹಕರಿಗೆ ಈ ರೀತಿಯ ಸಾರ್ವಜನಿಕ ದೂರು ಬಾರದಂತೆ ಕರ್ತವ್ಯ ನಿರ್ವಹಿಸುವಂತೆ "ಎಚ್ಚರಿಕೆ" ನೀಡಲಾಗಿದೆ. |
| 5 | ತುಮಕೂರು | ಕುಮಾರಿ.ಜೆ.ಬಿ.ಕಮಕಶ್ರೀ | ಸುರೇಶ್ ಬಿ.ಸಂ 875, ಚಾಲಕ ಭಾಗ್ಯಮ್ಮ ಬಿ.ಸಂ 2475, ನಿರ್ವಾಹಕಿ, ಚಿಕ್ಕಬಳ್ಳಾಪುರ ಘಟಕ | ಸದರಿಯವರುಗಳು ವಾಹನದಲ್ಲಿ ವಿದ್ಯಾರ್ಥಿ ಬಸ್ ಪಾಸ್‌ನ್ನು ನಿರಾಕರಿಸಿರುವ ಬಗ್ಗೆ | ಸದರಿಯವರಿಗೆ ಸೂಕ್ತ ಮಾರ್ಗದರ್ಶನ ನೀಡಿ ಮೌಖಿಕವಾಗಿ ಎಚ್ಚರಿಸಿದೆ. |
| 6 | ಮೈಸೂರು | ಜಯಂತ್.ಎಂ. | ಬಸವರಾಜು ಚಾಲಕ ಬಿ.ಸಂ.1970 ಗ್ರಾ.ಘ-3<br><br>ಸುರೇಶ.ಎಸ್.ಎಚ್. ಚಾ/ನಿ ನಿರ್ವಾಹಕ ಬಿ.ಸಂ.5045 ಗ್ರಾ.ಘ-3 | ಶ್ರೀ.ಜಯಂತ್ ಎಂಬ ವಿದ್ಯಾರ್ಥಿ ಮತ್ತು ಅವರ ಸಹಪಾಠಿಗಳು ಮಂಡ್ಯದಿಂದ ಕಾಲೇಜಿನ ಸ್ಥಳವಾದ ಮುದುಗೆರೆಗೆ ಪ್ರಯಾಣಿಸುವಾಗ ವಾಹನದ ಚಾಲಕ ಮತ್ತು ನಿರ್ವಾಹಕರು ಕೋರಿಕೆ ನಿಲುಗಡೆ ಸ್ಥಳವಾದ ಮುದುಗೆರೆ ಬಳಿ ನಿಲುಗಡೆಯನ್ನು ನೀಡದೆ ನಿರಾಕರಿಸಿ ವಿದ್ಯಾರ್ಥಿಗಳನ್ನು ನಿಂದಿಸಿರುವುದಾಗಿ ದೂರು ಸಲ್ಲಿಸಿರುತ್ತಾರೆ. | ಸದರಿ ದೂರಿಗೆ ಸಂಬಂಧಿಸಿದಂತೆ ಚಾಲಕ ಮತ್ತು ನಿರ್ವಾಹಕರಿಗೆ "ಎಚ್ಚರಿಕೆ" ಆದೇಶವನ್ನು ಜಾರಿ ಮಾಡಿದ್ದು, ಸಾರ್ವಜನಿಕ ಹಾಗೂ ವಿದ್ಯಾರ್ಥಿಗಳೊಂದಿಗೆ ಸೌಜನ್ಯಯುತವಾಗಿ ವರ್ತಿಸುವಂತೆ ಹಾಗೂ ಕೋರಿಕೆ ನಿಲುಗಡೆ ಸ್ಥಳಗಳಲ್ಲಿ ವಾಹನ ನಿಲುಗಡೆಯನ್ನು ನೀಡುವಂತೆ ಆದೇಶಿಸಲಾಗಿದೆ. |

| | | | | | |
|---|---|---|---|---|---|
| 7 | ಮೈಸೂರು | ಎನ್ ಕೆ ಪುಟ್ಟಸ್ವಾಮಿ | ಬಸವರಾಜು ನಿರ್ವಾಹಕರು- ಬಿ.ಸಂ.5273 | ವಿದ್ಯಾರ್ಥಿ ಪಾಸ್‌ನ್ನು ಮಾನ್ಯ ಮಾಡದೆ ಬಲವಂತವಾಗಿ ಟಿಕೇಟ್ ನೀಡಿರುವ ಬಗ್ಗೆ | ಸದರಿ ಪ್ರಕರಣದಲ್ಲಿ ನಿರ್ವಾಹಕರಿಗೆ ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಿ ಇನ್ನು ಮುಂದೆ ಇಂತಹ ಪ್ರಕರಣದಲ್ಲಿ ಭಾಗಿಯಾಗಬಾರದೆಂದು ಎಚ್ಚರಿಕೆ ನೀಡಿ ಅವರ ವೇತನದಿಂದ ರೂ.500.00 ಗಳನ್ನು ಮುರಿದುಕೊಳ್ಳಲು ಆದೇಶಿಸಲಾಗಿದೆ. |
| 8 | ಮೈಸೂರು | ಕಿರಣ್ ಜಿ | ಎನ್.ಶೇಖರ್, ಚಾಲಕ ಬಿಲ್ಲೆ ಸಂಖ್ಯೆ 46, ಗ್ರಾಮಾಂತರ ಘಟಕ-3, ಪ್ರಶಾಂತ್ ಮೂರ್ತಿ ಚಾ-ಕಂ-ನಿ ಬಿಲ್ಲೆ ಸಂಖ್ಯೆ 27626 | ಚಾಲನಾ ಸಿಬ್ಬಂದಿಗಳು ಪಾಸುದಾರ ಪ್ರಯಾಣಿಕರನ್ನು ಪ್ರಯಾಣಿಸು ಅನುಮತಿ ನೀಡದೆ ಅನುಚಿತವಾಗಿ ವರ್ತಿಸಿರುವ ಬಗ್ಗೆ. | ಸದರಿಯವರಿಗೆ ಸೂಕ್ತ ಮಾರ್ಗದರ್ಶನ ನೀಡಿ ಮೌಖಿಕವಾಗಿ ಎಚ್ಚರಿಸಿದೆ. |
| 9 | ಮೈಸೂರು | ಸೋಮಶೇಖರ್ | ಮಹೇಶ್ ಚಾಲಕ ಬಿಲ್ಲೆ ಸಂಖ್ಯೆ 580, ಹೆಚ್.ಡಿ.ಕೋಟೆ ಪಾಂಡುಕುಮಾರ್ ಚಾ-ಕಂ-ನಿ ಬಿಲ್ಲೆ ಸಂಖ್ಯೆ 13317 ಹೆಚ್.ಡಿ ಕೋಟೆ ಘಟಕ | ವಿದ್ಯಾರ್ಥಿ ಪಾಸ್‌ದಾರರನ್ನು ಸಮಯ 9:40ರ ಪ್ರಯಾಣಿಸಲು ಅನುಮತಿ ನೀಡದಿರುವ ಬಗ್ಗೆ. | ಸದರಿಯವರಿಗೆ ಸೂಕ್ತ ಮಾರ್ಗದರ್ಶನ ನೀಡಿ ಮೌಖಿಕವಾಗಿ ಎಚ್ಚರಿಸಿದೆ. |
| 10 | ಮಂಡ್ಯ | ಶ್ರೇಯಾ ಕಿರಣ ಸಿಂಧು.ಎಚ್.ಎನ್ | ದಯಾನಂದ.ಸಿ.ಪಿ ಚಾ/ನಿ 2473 ಪಾಂಡವಪುರ ಘಟಕ | ವಿದ್ಯಾರ್ಥಿ ಪಾಸ್‌ನ್ನು ಮಾನ್ಯ ಮಾಡದೆ ಬಲವಂತವಾಗಿ ಟಿಕೇಟ್ ನೀಡಿದ್ದರಿಂದ ವಿದ್ಯಾರ್ಥಿಗಳ ಮನಸ್ಸಿಗೆ ತುಂಬಾ ನೋವಾಗಿದೆ. | ಸದರಿ ಪ್ರಕರಣದಲ್ಲಿ ನಿರ್ವಾಹಕರಿಗೆ ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಿ ಇನ್ನು ಮುಂದೆ ಇಂತಹ ಪ್ರಕರಣದಲ್ಲಿ ಭಾಗಿಯಾಗಬಾರದೆಂದು ಎಚ್ಚರಿಕೆ ನೀಡಿ ಆದೇಶಿಸಲಾಗಿದೆ. |
| 11 | ಮಂಡ್ಯ | ಕಾರ್ತಿಕ್ | ಎಸ್.ಕುಮಾರ್ ಚಾಲಕ 1252 ನಾಗಮಂಗಲ ಘಟಕ | ವಿದ್ಯಾರ್ಥಿ ಪಾಸ್ ಮಾನ್ಯ ಮಾಡದೆ ಅಸಭ್ಯವಾಗಿ ವರ್ತಿಸಿ ಗುಡೆಮಾರನಹಳ್ಳಿಯಲ್ಲಿ ವಾಹನ ನಿಲ್ಲಿಸದಿರುವ ಬಗ್ಗೆ | ಸದರಿ ಪ್ರಕರಣದಲ್ಲಿ ನಿರ್ವಾಹಕರಿಗೆ ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಿ ಇನ್ನು ಮುಂದೆ ಇಂತಹ ಪ್ರಕರಣದಲ್ಲಿ ಭಾಗಿಯಾಗಬಾರದೆಂದು ಎಚ್ಚರಿಕೆ ನೀಡಿ ಅವರ ವೇತನದಿಂದ ರೂ.100.00 ಗಳನ್ನು ಮುರಿದುಕೊಳ್ಳಲು ಆದೇಶಿಸಲಾಗಿದೆ. |
| 12 | ಮಂಡ್ಯ | ಮಕ್ಕಳ ಸಹಾಯವಾಣಿ | ಎನ್.ಹೆಚ್.ಶಿವಶಂಕರ್ ನಿರ್ವಾಹಕ ಬಿಲ್ಲೆ ಸಂಖ್ಯೆ 1466 ನಾಗಮಂಗಲ ಘಟಕ | ವಿದ್ಯಾರ್ಥಿ ಪಾಸ್ ಮಾನ್ಯ ಮಾಡದಿರುವ ಬಗ್ಗೆ. | ನಿರ್ವಾಹಕರಿಗೆ ಎಚ್ಚರಿಕೆ ನೀಡಲಾಗಿದ್ದು, ವಿದ್ಯಾರ್ಥಿಗಳಿಗೆ ತೊಂದರೆ ನೀಡದಂತೆ ಕರ್ತವ್ಯ ನಿರ್ವಹಿಸಲು ಹಾಗೂ ಪಾಸ್ ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಭ್ಯವಾಗಿ ವರ್ತಿಸುವಂತೆ ಸೂಚಿಸಲಾಗಿದೆ. |
| 13 | ಮಂಡ್ಯ | ರಾಘವೇಂದ್ರ | ಎ.ತಮ್ಮಯ್ಯ ಚಾಲಕ-ಕಂ-ನಿರ್ವಾಹಕ ಬಿಲ್ಲೆ ಸಂಖ್ಯೆ 1785 | ವಿದ್ಯಾರ್ಥಿ ಪಾಸ್ ಮಾನ್ಯ ಮಾಡದಿರುವ ಬಗ್ಗೆ. | ನಿರ್ವಾಹಕರಿಗೆ ವಿದ್ಯಾರ್ಥಿಗಳಿಗೆ ತೊಂದರೆ ನೀಡದಂತೆ ಕರ್ತವ್ಯ ನಿರ್ವಹಿಸಲು ಹಾಗೂ ಪಾಸ್ ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಭ್ಯವಾಗಿ ವರ್ತಿಸುವಂತೆ ಸೂಚಿಸಿ ರೂ.100/- ದಂಡವನ್ನು ವಿಧಿಸಲಾಗಿರುತ್ತದೆ. |
| 14 | ಮಂಡ್ಯ | ಪ್ರಶಾಂತ್ | ಎಸ್.ಆರ್. ತ್ರಿನೇಶ್ ಚಾಲಕ ಹಾಗೂ ಕೆ.ಎಸ್.ಗಿರೀಶ್ ಚಾಲಕ-ಕಂ-ನಿರ್ವಾಹಕ ಬಿಲ್ಲೆ ಸಂಖ್ಯೆ 771 ಕೆ.ಆರ್.ಪೇಟೆ ಘಟಕ. | ವಿದ್ಯಾರ್ಥಿಗಳನ್ನು ನಿಗಮದ ವಾಹನದಲ್ಲಿ ಪ್ರಯಾಣಿಸಲು ಅನುಮತಿ ನೀಡದಿರುವ ಬಗ್ಗೆ. | ಸದರಿಯವರಿಗೆ ಸೂಕ್ತ ಮಾರ್ಗದರ್ಶನ ನೀಡಿ ಮೌಖಿಕವಾಗಿ ಎಚ್ಚರಿಸಿದೆ. |
| 15 | ಚಾಮರಾಜನಗರ | ಅಧ್ಯಕ್ಷರು ಎಸ್.ಡಿ.ಎಂ.ಸಿ ಸರ್ಕಾರಿ ಆದರ್ಶ ವಿದ್ಯಾಲಯ | ಎಮ್.ಮಂಜುನಾಥ ಚಾ/ನಿ ಬಿ.ಸಂ.689/4068 ಚಾ॥ನಗರ ಘಟಕ. | ಬಸ್ಸಿನಲ್ಲಿ ಪ್ರಯಾಣಿಸುವ ವಿದ್ಯಾರ್ಥಿಗಳಿಗೆ ದೈಹಿಕ ಮತ್ತು ಮಾನಸಿಕವಾಗಿ ಹಿಂಸೆ ನೀಡುತ್ತಿರುವ ಬಗ್ಗೆ | ಆಪಾದನೆ ಬಂದ ಚಾಲನಾ ಸಿಬ್ಬಂದಿಯನ್ನು ಅಮಾನತ್ತು ಗೊಳಿಸಲಾಗಿದ್ದು ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |
| 16 | ಚಾಮರಾಜನಗರ | ಕೀರ್ತನ | | ವಿದ್ಯಾರ್ಥಿ ಬಸ್ ಪಾಸ್‌ನ್ನು ಮಾನ್ಯ ಮಾಡದೆ ಟಿಕೆಟ್ ನೀಡಿರುವ ಬಗ್ಗೆ. | ಪಾಸುದಾರರೊಂದಿಗೆ ಸೌಜನ್ಯಯುತವಾಗಿ ವರ್ತಿಸುವಂತೆ ತಿಳುವಳಿಕೆ ನೀಡಲಾಗಿದೆ. |

| | | | | | |
|---|---|---|---|---|---|
| 17 | ಹಾಸನ | ಶ್ರೀ. ಆದರ್ಶ.ಆರ್.ಬಿನ್ ರಾಮಕೃಷ್ಣ.ಡಿ.ಸಿ. ಕೆ.ಆರ್.ನಗರ ತಾಲ್ಲೂಕು ಮೈಸೂರು ಜಿಲ್ಲೆ . | ತಿಮ್ಮೇಗೌಡ ಚಾಲಕ/ನಿರ್ವಾಹಕ ಬಿಲ್ಲೆ ಸಂಖ್ಯೆ.1087 | ವಿದ್ಯಾರ್ಥಿ ಬಸ್ ಪಾಸ್ ಅನುಮತಿಸದಿರುವ ಬಗ್ಗೆ | ನಿರ್ವಾಹಕರಿಗೆ ತೀವ್ರವಾಗಿ ಎಚ್ಚರಿಕೆ ನೀಡಲಾಗಿದ್ದು, ವಿದ್ಯಾರ್ಥಿಗಳಿಗೆ ತೊಂದರೆ ನೀಡದಂತೆ ಕರ್ತವ್ಯ ನಿರ್ವಹಿಸಲು ಹಾಗೂ ಪಾಸ್ ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಭ್ಯವಾಗಿ ವರ್ತಿಸುವಂತೆ ಸೂಚಿಸಲಾಗಿದೆ. |
| 18 | ಹಾಸನ | ಟಿ.ಕೆ.ಕಿರಣ್, ವಿದ್ಯಾರ್ಥಿ, ಚಿಕ್ಕಮಗಳೂರು | ಕೆ.ಎಂ.ಆನಂದ್ ಚಾಲಕ-ಕಂ-ನಿರ್ವಾಹಕ ಬಿಲ್ಲೆ ಸಂಖ್ಯೆ 1377 ಹಾಸನ ಘಟಕ-1 | ವಿದ್ಯಾರ್ಥಿ ಪಾಸ್ ಮಾನ್ಯ ಮಾಡದಿರುವ ಬಗ್ಗೆ. | ನಿರ್ವಾಹಕರಿಗೆ ವಿದ್ಯಾರ್ಥಿಗಳಿಗೆ ತೊಂದರೆ ನೀಡದಂತೆ ಕರ್ತವ್ಯ ನಿರ್ವಹಿಸಲು ಹಾಗೂ ಪಾಸ್ ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಭ್ಯವಾಗಿ ವರ್ತಿಸುವಂತೆ ಸೂಚಿಸಿ ರೂ.250/- ದಂಡವನ್ನು ವಿಧಿಸಲಾಗಿರುತ್ತದೆ. |
| 19 | ಹಾಸನ | ಕುಮಾರಿ ರಮ್ಯ ಪಿ.ಎಸ್, | ಕೆ.ಲೋಕೇಶ್ ಚಾಲಕ-ಕಂ-ನಿರ್ವಾಹಕರು ಬಿಲ್ಲೆ ಸಂಖ್ಯೆ 421 ಹೊಳೆನರಸೀಪುರ ಘಟಕ | ವಿದ್ಯಾರ್ಥಿ ಪಾಸ್‌ದಾರರನ್ನು ನಿಗದಿತ ನಿಲುಗಡೆ ಸ್ಥಳದಲ್ಲಿ ನಿಲುಗಡೆ ನೀಡದಿರುವ ಬಗ್ಗೆ. | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಿದೆ |
| 20 | ಚಿಕ್ಕಮಗಳೂರು | ಕುಮಾರಿ ಹೇಮಲತಾ | ಅನಿಲ್ ಕುಮಾರ್, ಚಾ/ನಿ, ಬಿ. ಸಂ:837, ಚಿಕ್ಕಮಗಳೂರು ಘಟಕ | ದಿ:18.06.19 ರಂದು ವಾಹನ ಸಂಖ್ಯೆ:ಕೆಎ-18 ಎಫ್-502 ವಾಹನದ ನಿರ್ವಾಹಕರು ಐ.ಡಿ. ಕಾರ್ಡ್ ಮತ್ತು ಫೀಜು ರಶೀದಿ ತೋರಿಸಿದರೂ ಟಿಕೇಟ್ ನೀಡಿರುವ ಬಗ್ಗೆ | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಿದೆ |
| 21 | ಚಿಕ್ಕಮಗಳೂರು | ಸುಬ್ರಮಣ್ಯ | ಮನೋಹರ, ಚಾ/ನಿ, ಬಿ ಸಂ:1349, ರಮೇಶ್, ಚಾ/ನಿ, ಬಿ. ಸಂ:1050 ಕಡೂರು ಘಟಕ | ದಿನಾಂಕ:20.07.19 ರಂದು ವಾಹನ ಸಂಖ್ಯೆ:ಕೆಎ-18 ಎಫ್-595 ರಲ್ಲಿ ಪಾಸ್ ವಿದ್ಯಾರ್ಥಿಯು ಹಾಸನದಿಂದ ಹೊಳೆನರಸೀಪುರಕ್ಕೆ ಪ್ರಯಾಣಿಸಲು ಸದರಿ ವಾಹನವನ್ನು ಹತ್ತಲು ಹೋದಾಗ ನಿರ್ವಾಹಕರು ಈ ಬಸ್ಸಿಗೆ ಬೇಡ ಬೇರೆ ಬಸ್ಸಿಗೆ ಹತ್ತು ಎಂದಿದ್ದು, ಕೇಳಿದ್ದಕ್ಕೆ ತಲೆಹರಟೆ ಮಾಡಬೇಡ ಎಂದು ಹೇಳಿರುವ ಬಗ್ಗೆ. | ಸದರಿ ಚಾಲಕ ಮತ್ತು ನಿರ್ವಾಹಕರಿಗೆ ಎಚ್ಚರಿಕೆ ನೀಡಿದೆ |
| 22 | ಚಿಕ್ಕಮಗಳೂರು | ಯಶವಂತಗೌಡ | ಸಿ. ಎಸ್. ಯೋಗೀಶಾಚಾರ್ ನಿರ್ವಾಹಕ, ಬಿ. ಸಂ:3902 ಚಿಕ್ಕಮಗಳೂರು ಘಟಕ | ದಿನಾಂಕ:23.07.19 ರಂದು ವಾಹನ ಸಂಖ್ಯೆ:ಕೆಎ-18 ಎಫ್-942 ರ ಬೆಂಗಳೂರಿನಿಂದ ಹಾಸನಕ್ಕೆ ಕಾರ್ಯಾಚರಣೆಯಾಗುತ್ತಿದ್ದ ವಾಹನದಲ್ಲಿ ವಿದ್ಯಾರ್ಥಿ ಪಾಸ್ ಹೊಂದಿದ ಪ್ರಯಾಣಿಕರು ಜಾಲಹಳ್ಳಿ ಕ್ರಾಸ್‌ನಿಂದ ಕುಣಿಗಲ್‌ಗೆ ಪ್ರಯಾಣಿಸಲು ಹೋದಾಗ ನಿರ್ವಾಹಕರು ಪಾಸ್ ಅಲೋ ಇಲ್ಲ ಎಂದು ಟಿಕೇಟ್ ತೆಗೆದುಕೊಳ್ಳಲು ಒತ್ತಾಯಿಸಿರುವ ಬಗ್ಗೆ. | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಿದೆ |
| 23 | ಚಿಕ್ಕಮಗಳೂರು | ನಿರಂಜನ್ | ಧರ್ಮ, ಚಾ/ನಿ, ಬಿ. ಸಂ.792, ಮೂಡಿಗೆರೆ ಘಟಕ | ದಿನಾಂಕ:21.08.19 ರಂದು ವಾಹನ ಸಂಖ್ಯೆ:ಕೆಎ-18 ಎಫ್-870 ವಾಹನಕ್ಕೆ ಬೇಲೂರ್ ಕ್ರಾಸ್‌ನಲ್ಲಿ ಹತ್ತಲು ಹೋದಾಗ ಪಾಸ್ ಅಲೋ ಇಲ್ಲ ಎಂದು ಹತ್ತಿಸದೆ ಇರುವ ಬಗ್ಗೆ. | ಸದರಿ ನಿರ್ವಾಹಕರ ವೇತನದಲ್ಲಿ ರೂ.500/-ಗಳನ್ನು 2 ಸಮಾನ ಕಂತುಗಳಲ್ಲಿ ಕಡಿತಗೊಳಿಸಲು ಆದೇಶಿಸಿ ಪ್ರಯಾಣಿಕರೊಂದಿಗೆ ಸೌಜನ್ಯದಿಂದ ವರ್ತಿಸಿ ಇನ್ನು ಮುಂದೆ ಇಂತಹ ಪ್ರಕರಣಗಳಲ್ಲಿ ಭಾಗಿಯಾಗದಂತೆ ತೀವ್ರ ಎಚ್ಚರಿಕೆ ನೀಡಿದೆ. |
| 24 | ಚಿಕ್ಕಮಗಳೂರು | ತರುಣ್ | ಕೇಶವಮೂರ್ತಿ, ನಿರ್ವಾಹಕ, ಬಿ. ಸಂ:5344, ಸಕಲೇಶಪುರ ಘಟಕ | ದಿ:23.08.19 ರಂದು ವಾಹನ ಸಂಖ್ಯೆ:ಕೆಎ-18 ಎಫ್-689 ಮೈಸೂರಿನಿಂದ ಚಿಕ್ಕಮಗಳೂರಿಗೆ ಕಾರ್ಯಾಚರಣೆಯಾಗುತ್ತಿದ್ದ ವಾಹನದಲ್ಲಿ ಪಾಸ್ ವಿದ್ಯಾರ್ಥಿಯು ಕೆ. ಆರ್ ನಗರದಿಂದ ಮೈಸೂರಿಗೆ ಪ್ರಯಾಣಿಸಲು ಹತ್ತಿದಾಗ ತಳ್ಳಿರುವ ಬಗ್ಗೆ. | ಸದರಿ ನಿರ್ವಾಹಕರಿಗೆ ಆಪಾದನಾ ಪತ್ರವನ್ನು ಜಾರಿ ಮಾಡಿದ್ದು, ಶಿಸ್ತು ಕ್ರಮ ಬಾಕಿ ಇರುತ್ತದೆ. |
| 25 | ಚಿಕ್ಕಮಗಳೂರು | ಎ.ಬಿ.ವಿ.ಪಿ ವಿದ್ಯಾರ್ಥಿಗಳು | ಎಂ.ವಿ. ಮಧು ಚಾಲಕ, ಬಿ. ಸಂ:6025 ಎಂ.ಜೆ. ಲೋಹಿತ್, ಚಾ/ನಿ, ಬಿ. ಸಂ:839 ಚಿಕ್ಕಮಗಳೂರು ಘಟಕ. | ದಿ:09.09.2019 ರಂದು ವಾಹನ ಸಂಖ್ಯೆ:ಕೆಎ-13 ಎಫ್-2192 ರ ಚಾಲಕ ಮತ್ತು ನಿರ್ವಾಹಕರು ಪಾಸ್ ವಿದ್ಯಾರ್ಥಿಗಳನ್ನು ಹತ್ತಿಸದೆ ಇರುವ ಬಗ್ಗೆ. | ಸದರಿ ಚಾಲಕ ಮತ್ತು ನಿರ್ವಾಹಕರಿಗೆ ಎಚ್ಚರಿಕೆ ನೀಡಿದೆ |
| 26 | ಚಿಕ್ಕಮಗಳೂರು | ಧರ್ಮೇಂದ್ರ | ಚೆಲುವ ರಾಜ ಚಾ/ನಿ, ಬಿ. ಸಂ:1861, ಸಕಲೇಶಪುರ ಘಟಕ. | ದಿ:05.10.2019 ರಂದು ಬೆಂಗಳೂರಿನಿಂದ ಹಾಸನಕ್ಕೆ ಕಾರ್ಯಾಚರಣೆಯಾಗುತ್ತಿದ್ದ ವಾಹನ ಸಂಖ್ಯೆ:ಕೆಎ-57 ಎಫ್-2776 ವಾಹನದಲ್ಲಿ ವಿದ್ಯಾರ್ಥಿಗಳು ಹತ್ತಿದರು ಎಂಬ ಕಾರಣಕ್ಕೆ ನಿರ್ವಾಹಕರು ಬಾಯಿಗೆ ಬಂದಂತೆ ಬಯ್ಯಲು ಶುರು ಮಾಡಿದರು. ನಂತರ | ಸದರಿ ದೂರಿನ ಪ್ರಕರಣವು ತನಿಖೆ ಹಂತದಲ್ಲಿರುತ್ತದೆ. ತನಿಖಾ ವರದಿ ಬಂದ ನಂತರ ವರದಿಯನ್ವಯ ಕ್ರಮ ಕೈಗೊಳ್ಳಲಾಗುವುದು. |

| | | | | | |
|---|---|---|---|---|---|
| | | | | ವಿದ್ಯಾರ್ಥಿಗಳು ಸೀಟಿನಲ್ಲಿ ಕುಳಿತುಕೊಳ್ಳದಂತೆ ಸೂಚಿಸಿ, ರೌಡಿಯ ರೀತಿ ಧಮಕಿ ಹಾಕಲು ಶುರು ಮಾಡಿರುವ ಬಗ್ಗೆ. | |
| 27 | ಚಿಕ್ಕಮಗಳೂರು | ಧನುಜಿತ್ | ಉಮೇಶ ಚಾಲಕ ಬಿಲ್ಲೆ ಸಂಖ್ಯೆ 8688 ನಾಗೇಶ್ ಚಾಲಕ-ಕಂ-ನಿರ್ವಾಹಕ 1245 ಸಕಲೇಶಪುರ ಘಟಕ | ವಿದ್ಯಾರ್ಥಿ ಪಾಸ್‌ದಾರರನ್ನು ಚೆಳಲ್ಕೆರೆ ಕಾಲೇಜು ಬಳಿ ನಿಲುಗಡೆ ನೀಡದಿರುವ ಬಗ್ಗೆ. | ಪಾಸ್ ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಭ್ಯವಾಗಿ ವರ್ತಿಸುವಂತೆ ಸೂಚಿಸಿ ರೂ.500/- ದಂಡವನ್ನು ವಿಧಿಸಲಾಗಿರುತ್ತದೆ. |
| 28 | ಚಿಕ್ಕಮಗಳೂರು | ಅನಿಲ್ ಪ್ರಸಾದ್ | ಗೋಪಾಲ ಗೋವಿ ನಿರ್ವಾಹಕ ಬಿಲ್ಲೆ ಸಂಖ್ಯೆ 5226 ಕಡೂರು ಘಟಕ | ವಿದ್ಯಾರ್ಥಿಗಳನ್ನು ನಿಗಮದ ವಾಹನದಲ್ಲಿ ಪ್ರಯಾಣಿಸಲು ಅನುಮತಿ ನೀಡದಿರುವ ಬಗ್ಗೆ. | ಪಾಸ್ ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಭ್ಯವಾಗಿ ವರ್ತಿಸುವಂತೆ ಸೂಚಿಸಿ ರೂ.500/- ದಂಡವನ್ನು ವಿಧಿಸಲಾಗಿರುತ್ತದೆ. |
| 29 | ಪುತ್ತೂರು | ಸಾಧಿಕ್ | ಆದರ್ಶ ಎನ್.ಎಸ್. ಬಿಲ್ಲೆ ಸಂಖ್ಯೆ 10195 | ವಿದ್ಯಾರ್ಥಿ ಪಾಸ್ ಮಾನ್ಯ ಮಾಡದಿರುವ ಬಗ್ಗೆ. | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಲಾಗಿದೆ. |
| 30 | ಪುತ್ತೂರು | ವಿದ್ಯಾರ್ಥಿಗಳು | ಆಲ್ವಿನ್ ವಿಲ್ಸನ್ ತಾವ್ರೋ ಬಿಲ್ಲೆ ಸಂಖ್ಯೆ 4826 | ವಿದ್ಯಾರ್ಥಿಗಳನ್ನು ನಿಗಮದ ವಾಹನದಲ್ಲಿ ಪ್ರಯಾಣಿಸಲು ಅನುಮತಿ ನೀಡದಿರುವ ಬಗ್ಗೆ. | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಲಾಗಿದೆ. |
| 31 | ದಕ್ಷಿಣ ಕನ್ನಡ | ಸಾರ್ವಜನಿಕ ಪ್ರಯಾಣಿಕರು | ಹರೀಶ, ನಿರ್ವಾಹಕ್, 5095/3011 | ವಿದ್ಯಾರ್ಥಿ ಪಾಸು ಹೊಂದಿರುವ ಶಾಲಾ-ಕಾಲೇಜು ವಿದ್ಯಾರ್ಥಿಗಳೊಂದಿಗೆ ಮೃಗೀಯ ವರ್ತನೆ | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಲಾಗಿದೆ. |
| 32 | ದಕ್ಷಿಣ ಕನ್ನಡ | ನಿತಿನ್ ಕುಮಾರ್ | ರಾಜೇಂದ್ರ ವೈ ಶೆಟ್ಟಿ, ನಿರ್ವಾಹಕ, 3231/4034 | ವಿದ್ಯಾರ್ಥಿ ಪಾಸು ತೋರಿಸಿದರೂ ಅವರೊಂದಿಗೆ ಅಸಭ್ಯವಾಗಿ ವರ್ತಿಸಿರುವ ಬಗ್ಗೆ | ಸದರಿ ನಿರ್ವಾಹಕರಿಗೆ ಎಚ್ಚರಿಕೆ ನೀಡಲಾಗಿದೆ. |
| 33 | ದಾವಣಗೆರೆ | ಜ್ಯೋತಿ | ತಿಮ್ಮರಾಯ ಚಾಲಕ 518 | ನಿಲುಗಡೆ ನೀಡುವ ವಿಷಯಕ್ಕೆ ಅವಾಚ್ಯ ಶಬ್ದಗಳಿಂದ ನಿಂದಿಸಿರುವ ಬಗ್ಗೆ | ದೂರುದಾರರನ್ನು ಮತ್ತು ಚಾಲಕರನ್ನು ವಿಭಾಗೀಯ ಕಛೇರಿಗೆ ಕರೆಯಿಸಿ ವಿಚಾರಣೆ ಮಾಡಲಾಗಿರುತ್ತದೆ. ನಂತರ ದೂರುದಾರರು ಪ್ರಕರಣವನ್ನು ಹಿಂಪಡೆದಿರುವುದಾಗಿ ಲಿಖಿತ ಹೇಳಿಕೆ ಸಲ್ಲಿಸಿದ್ದರಿಂದ, ಪ್ರಕರಣ ಮುಕ್ತಾಯಗೊಳಿಸಿ ದೂರುದಾರರಿಗೆ ವಿಷಾದವ್ಯಕ್ತಪಡಿಸಿ ಪತ್ರ ಬರೆಯಲಾಗಿರುತ್ತದೆ. |
| 34 | ದಾವಣಗೆರೆ | ರಾಜೇಶ್ | ಸುರೇಶ್ ಹೊಳಲೂರು ಚಾಲಕ-ಕಂ-ನಿರ್ವಾಹಕ ಬಿಲ್ಲೆ ಸಂಖ್ಯೆ 3546 ಹರಿಹರ ಘಟಕ | ವಿದ್ಯಾರ್ಥಿ ಪಾಸ್‌ದಾರರನ್ನು ನಿಗದಿತ ನಿಲುಗಡೆ ಸ್ಥಳದಲ್ಲಿ ನಿಲುಗಡೆ ನೀಡದಿರುವ ಬಗ್ಗೆ. | ದೂರುದಾರರು ದೂರನ್ನು ಹಿಂಪಡೆದಿರುವುದರಿಂದ ಪ್ರಕರಣವನ್ನು ಮುಕ್ತಾಯಗೊಳಿಸಲಾಗಿರುತ್ತದೆ. |
| 35 | ದಾವಣಗೆರೆ | ಸವಿತ ಕೆ.ಎನ್ | ಸಂತೋಷ ಚಾಲಕ-ಕಂ-ನಿರ್ವಾಹಕ ಬಿಲ್ಲೆ ಸಂಖ್ಯೆ 8779 ಹರಿಹರ ಘಟಕ | ಅಸಭ್ಯವಾಗಿ ವರ್ತಿಸಿರುವ ಬಗ್ಗೆ | ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |
| 36 | ದಾವಣಗೆರೆ | ಮಂಜುಳ | ವಿಜಯಮ್ಮ ಕೆ | ವಿದ್ಯಾರ್ಥಿ ಪಾಸ್ ಜೊತೆಗೆ ಇ.ಡಿ.ಕಾರ್ಡ್ ಇಲ್ಲದಿರುವ ಬಗ್ಗೆ | ದೂರುದಾರರನ್ನು ಮತ್ತು ಚಾಲಕರನ್ನು ವಿಭಾಗೀಯ ಕಛೇರಿಗೆ ಕರೆಯಿಸಿ ವಿಚಾರಣೆ ಮಾಡಲಾಗಿರುತ್ತದೆ. ನಂತರ ದೂರುದಾರರು ಪ್ರಕರಣವನ್ನು ಹಿಂಪಡೆದಿರುವುದಾಗಿ ಲಿಖಿತ ಹೇಳಿಕೆ ಸಲ್ಲಿಸಿದ್ದರಿಂದ, ಪ್ರಕರಣ ಮುಕ್ತಾಯಗೊಳಿಸಿ ದೂರುದಾರರಿಗೆ ವಿಷಾದವ್ಯಕ್ತಪಡಿಸಿ ಪತ್ರ ಬರೆಯಲಾಗಿರುತ್ತದೆ. |
| 37 | ಚಿತ್ರದುರ್ಗ | ಶಶಿಕುಮಾರ್ | ಉಮಾದೇವಿ ನಿರ್ವಾಹಿಕಿ ಬಿಲ್ಲೆ 2668 ಸಂಖ್ಯೆ ಚಿತ್ರದುರ್ಗ ಘಟಕ | ವಿದ್ಯಾರ್ಥಿ ಪಾಸ್‌ನ್ನು ಮಾನ್ಯ ಮಾಡದೆ ಟಿಕೇಟ್ ನೀಡದಿರುವ ಬಗ್ಗೆ | ಎಚ್ಚರಿಕೆ ನೀಡಲಾಗಿದೆ |
| 38 | ಚಿತ್ರದುರ್ಗ | ಮನಿಷ ಕಿರಣ್ | ಟಿ.ಜಗದೀಶ್ ಚಾಲಕ ಬಿಲ್ಲೆ ಸಂಖ್ಯೆ 293 ಚಿತ್ರದುರ್ಗ ಘಟಕ | ಅನುಚಿತ ವರ್ತನೆಯ ಬಗ್ಗೆ | ಪ್ರಕರಣ ಇಲಾಖಾ ವಿಚಾರಣೆ ಹಂತದಲ್ಲಿರುತ್ತದೆ. |
| 39 | ಶಿವಮೊಗ್ಗ | ಉಮೇಶ್ | ಕೆ.ಎನ್. ರಾಜಪ್ಪ. ನಿರ್ವಾಹಕ, ಬಿ.ಸಂ. 2323 | ವಿದ್ಯಾರ್ಥಿ ಬಸ್ ಪಾಸ್ ಅನುಮತಿಸದಿರುವ ಬಗ್ಗೆ | ಪ್ರಕರಣ ಇಲಾಖಾ ವಿಚಾರಣೆ ಹಂತದಲ್ಲಿರುತ್ತದೆ. |

